KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೧೧, ೨೦೦೯ (ಜೇಷ್ಠ ೨೧, ಶಕ ವರ್ಷ ೧೯೩೧) | ಸಂಚಿಕೆ ೨೪ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ಶ್ರೀ ಎಸ್. ಸಿದ್ದಲಿಂಗಮೂರ್ತಿ, ಪತ್ರಾಂಕಿತ ವ್ಯವಸ್ಥಾಪಕ ಇವರಿಗೆ ಆಡಳಿತ ಸಹಾಯಕ ಹುದ್ದೆಗೆ ನೀಡಿರುವ ಬಡ್ತಿಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಅಪಜೀ 72 ಹುಸ್ರಮು 2006, ದಿನಾಂಕ 28–8–2007.
2. ಸರ್ಕಾರದ ಆದೇಶ ಸಂ: ಅಪಜೀ 72 ಹುಸ್ರಮು 2006, ದಿನಾಂಕ 5–10–2007.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು, ಇವರ ಪತ್ರ ಸಂಖ್ಯೆ: ಎ1/ಇಎಸ್‌ಟಿ/ಸಿಆರ್–91/2007–08, ದಿನಾಂಕ 11–8–2008.

**ಪ್ರಸ್ತಾವನೆ:**

ಶ್ರೀ ಎಸ್. ಸಿದ್ದಲಿಂಗಮೂರ್ತಿ, ಪತ್ರಾಂಕಿತ ವ್ಯವಸ್ಥಾಪಕರು ಇವರಿಗೆ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ 28–8–2007ರ ಪ್ರಕಾರ ಪತ್ರಾಂಕಿತ ವ್ಯವಸ್ಥಾಪಕ ವೃಂದದಿಂದ ಆಡಳಿತ ಸಹಾಯಕ ವೃಂದಕ್ಕೆ ಬಡ್ತಿ ನೀಡಿರುವುದನ್ನು ಶ್ರೀ ಎಸ್. ಸಿದ್ದಲಿಂಗಮೂರ್ತಿ, ಪತ್ರಾಂಕಿತ ವ್ಯವಸ್ಥಾಪಕರು ಇವರು ಕೋರಿಕೆಯ ಮೇರೆಗೆ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ 5–10–2007ರ ಆದೇಶದಲ್ಲಿ ಒಂದು ವರ್ಷ ಕಾಲ ಮುಂದೂಡಿ, ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಯಲ್ಲಿಯೇ ಮುಂದುವರಿಸಲಾಗಿತ್ತು.

ಶ್ರೀ ಎಸ್. ಸಿದ್ದಲಿಂಗಮೂರ್ತಿ, ಪತ್ರಾಂಕಿತ ವ್ಯವಸ್ಥಾಪಕರು ಇವರು ದಿನಾಂಕ 19–7–2008ರ ಮನವಿಯಲ್ಲಿ ಅವರ ಕೌಟುಂಬಿಕ ತೊಂದರೆಗಳ ಕಾರಣಗಳಿಂದ ಸದರಿಯವರಿಗೆ ನೀಡಿರುವ ಮುಂಬಡ್ತಿಯನ್ನು ತಾತ್ಕಾಲಿಕವಾಗಿ ಮುಂದೂಡುವಂತೆ ಕೋರಿರುವುದನ್ನು ಪರಿಶೀಲಿಸಿ, ಸೂಕ್ತ ನಿರ್ಣಯ ತೆಗೆದುಕೊಳ್ಳಲು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪ್ರಸ್ತಾವನೆ ಮತ್ತು ಶ್ರೀ ಎಸ್. ಸಿದ್ದಲಿಂಗಮೂರ್ತಿ, ಪತ್ರಾಂಕಿತ ವ್ಯವಸ್ಥಾಪಕರು ಇವರ ಮನವಿಯನ್ನು ಪರಿಗಣಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 23 ಹುಸ್ರಮು 2008, ಬೆಂಗಳೂರು, ದಿನಾಂಕ 15ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದ, ಶ್ರೀ ಎಸ್. ಸಿದ್ದಲಿಂಗಮೂರ್ತಿ, ಪತ್ರಾಂಕಿತ ವ್ಯವಸ್ಥಾಪಕರು ಇವರಿಗೆ ಅಧಿಸೂಚನೆ ದಿನಾಂಕ 28–8–2007ರ ಪ್ರಕಾರ ಪತ್ರಾಂಕಿತ ವ್ಯವಸ್ಥಾಪಕರ ವೃಂದದಿಂದ ಆಡಳಿತ ಸಹಾಯಕ ವೃಂದಕ್ಕೆ ಬಡ್ತಿ

ನೀಡಿ, ಸರ್ಕಾರದ ಆದೇಶ ದಿನಾಂಕ 5–10–2007ರಲ್ಲಿ ಮುಂದೂಡಿರುವುದನ್ನು ಇನ್ನೊಂದು ವರ್ಷ ಕಾಲ ಮುಂದೂಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.23

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ವಿಷಯ:** ಪರಿಹಾರಾತ್ಮಕ ನೆಡುತೋಪುಗಳ ದರ ಪರಿಷ್ಕರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 44 ಎಫ್ಎಪಿ 96, ದಿನಾಂಕ 3–2–1997.
2. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 156 ಎಫ್ಎಪಿ 2002, ದಿನಾಂಕ 28–11–2002.
3. ಸರ್ಕಾರಿ ಆದೇಶ ಸಂಖ್ಯೆ: ಅಪಜೀ 102 ಎಫ್ಎಪಿ 2008, ದಿನಾಂಕ 15–10–2008.
4. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಎ5(6) ಜಿಎಫ್ಎಲ್/ಸಿಆರ್/178/95–96, ದಿನಾಂಕ 1–10–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 3–2–1997ರ ಆದೇಶದಲ್ಲಿ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ರೂ. 30,000–00ಗಳನ್ನು ನಿಗಧಿಪಡಿಸಿ, ದಿನಾಂಕ 1–4–1996 ರಿಂದ ಜಾರಿಯಲ್ಲಿರುತ್ತದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ 28–11–2002ರ ಆದೇಶದಲ್ಲಿ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ರೂ. 54,200–00ಗಳನ್ನು ನಿಗಧಿಪಡಿಸಿ, ದಿನಾಂಕ 1–4–2001 ರಿಂದ ಜಾರಿಯಲ್ಲಿರುತ್ತದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ 15–10–2008ರ ಆದೇಶದಲ್ಲಿ ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ರೂ. 54,200–00 ಗಳಿಂದ ರೂ. 84,000/–ಗಳಿಗೆ ಹೆಚ್ಚಿಸಿ ಉಪಯೋಗಿತ ಸಂಸ್ಥೆಗಳಿಂದ ವಸೂಲು ಮಾಡಲು ಹಾಗೂ ದಿನಾಂಕ 1–10–2008 ರಿಂದ ಜಾರಿಯಲ್ಲಿರುತ್ತದೆಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ 1–10–2008ರ ಪತ್ರದಲ್ಲಿ ಪರಿಹಾರಾತ್ಮಕ ನೆಡುತೋಪುಗಳ ದರಪರಿಷ್ಕರಣೆ ಪ್ರಸ್ತಾವನೆಯು 2008–09ನೇ ಸಾಲಿನಿಂದ ಸಾಮಾನ್ಯವಾಗಿ ಮಂಜೂರಾದ ಅನುಸೂಚಿತ ದರಗಳನ್ವಯ ದಿನಾಂಕ 2–6–2008ರಂದು ಪ್ರಸ್ತಾವನೆ ಸಲ್ಲಿಸಲಾಗಿದೆ. ಅದರನ್ವಯ ನೆಡುತೋಪಿನ ದರವನ್ನು ದಿನಾಂಕ 1–4–2008 ರಿಂದ ಪೂರ್ವಾನ್ವಯವಾಗಿ ನಿಗದಿಪಡಿಸುವಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ದಿನಾಂಕ 1–10–2008 ರಿಂದ ಜಾರಿಗೆ ಬರುವಂತೆ, ಪ್ರತಿ ಹೆಕ್ಟೇರ್‌ಗೆ ರೂ. 54,200–00 ಗಳಿಂದ ರೂ. 84,000–00 ಗಳಿಗೆ ಸರ್ಕಾರಿ ಆದೇಶ ದಿನಾಂಕ 15–10–2008 ಹೆಚ್ಚಿಸಿರುವುದನ್ನು ಮಾರ್ಪಡಿಸಿ, ದಿನಾಂಕ 1–4–2008 ರಿಂದ ಪೂರ್ವಾನ್ವಯವಾಗಿ ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 102 ಎಫ್ಎಪಿ 2008, ಬೆಂಗಳೂರು, ದಿನಾಂಕ 11ನೇ ಡಿಸೆಂಬರ್ 2008.**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಅರಣ್ಯ ಭೂಮಿಯನ್ನು ಅರಣ್ಯೇತರ ಉದ್ದೇಶಗಳಿಗೆ ಬಿಡುಗಡೆ ಮಾಡುವ ಸಂದರ್ಭದಲ್ಲಿ ಪರಿಹಾರಾತ್ಮಕ ನೆಡುತೋಪು ಬೆಳೆಸುವ ಸಲುವಾಗಿ ತಗಲುವ ವೆಚ್ಚ ಪ್ರತಿ ಹೆಕ್ಟೇರ್‌ಗೆ ದಿನಾಂಕ 1–10–2008 ರಿಂದ ಜಾರಿಗೆ ಬರುವಂತೆ ರೂ. 54,200–00 ಗಳಿಂದ ರೂ. 84,000–00ಗಳಿಗೆ ಹೆಚ್ಚಿಸಿರುವುದನ್ನು ಮಾರ್ಪಡಿಸಿ, ದಿನಾಂಕ 1–4–2008 ರಿಂದ ಪೂರ್ವಾನ್ವಯವಾಗಿ ರೂ. 84,000–00 ಗಳಂತೆ ಉಪಯೋಗಿತ ಸಂಸ್ಥೆಗಳಿಂದ ವಸೂಲಿ ಮಾಡಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.21

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## COMMERCE AND INDUSTRIES SECRETARIAT

**Subject:** Proposal of M/s Shipco Infrastructure Pvt. Ltd., (SIPL) to include Pakarahalli Village, Bangarapet Taluk, Kolar District in the proposed "Logistic Inter Model Free Zone SEZ" – Approval for – Orders reg.

**Read:**
1. Proceedings of the 7th State High Level Clearance Committee (SHLCC) meeting held on 28-8-2006.
2. G.O. No. CI 94 SPI 2007, dated 11-7-2007.
3. Proceedings of the 16th State High Level Clearance Committee (SHLCC) meeting held on 19-11-2008.

**Preamble:**

The project proposal of M/s Shipco Infrastructure Pvt. Ltd., (SIPL) to establish a "Logistic Inter Model Free Zone SEZ" with an investment of Rs. 706.00 crores in 300 acres of land in the villages of Hudkala, Krishnapura, Vaggayanedenne and Aniganahalli, Bangarapete Taluk, Kolar District through KIADB acquisition process was approved in the 7th State High Level Clearance Committee meeting held on 28-8-2006. Accordingly, Government Order read above (2) was issued.

M/s SIPL has acquired 106 acres out of 300 acres. In view of some land owners are not interested in selling their land, who have agreed earlier. Company has requested for inclusion of Sy. Nos. 24/1, 20/P4, 18/2, 21, 32, 20, 20/P6, 22 55/P6 and 20/P of Pakarahalli village, Bangarapet taluk, Kolar district in the proposed "Logistic Inter Model Free Zone SEZ" totaling 14 acres. The requirement of land for the 1st phase will be 120 acres. The company propose to acquire balance 200 acres at a later stage for the 2nd phase from the villages of Hudkala, Krishnapura, Vaggayanedenne, Aniganahalli and Pakarahalli, Bangarapete Taluk, Kolar District through KIADB acquisition process.

The State High Level Clearance Committee, after detailed discussion of the proposal of the said Company, vide the proceedings read above (3) has recommended for approval of the project.

Government has examined the recommendations made by the State High Level Clearance Committee in its 16th Meeting held on 19-11-2008 in all aspects. Hence the following order.

**Government Order No. CI 8 SPI 2009, Bangalore Dated 10th February 2009**

In the circumstances explained above, Government is pleased to accord approval to M/s Shipco Infrastructure Pvt. Ltd., (SIPL) to include Pakarahalli Village, Bangarapet Taluk, Kolar District in the proposed "Logistic Inter Model Free Zone SEZ".

KIADB to acquire 14 acres of land on consent at Sy. Nos. 24/1, 20/P4, 18/2, 21, 32, 20, 20/P6, 22, 55/P6 and 20/P of Pakarahalli Village, Bangarapet taluk, Kolar District. The unit shall submit consent letters from the land owners of 14 acres to KIADB before KIADB initiates acquisition.

For infrastructure, incentives and concessions and conditions, G.O. dated 11-7-2007 read above (2) holds good.

This approval is valid for a period of two years from the date of issue.

By order and in the name of the Governor of Karnataka,

P.R.680

**APARNA PAVATE**

Desk Officer (Technical Cell), Commerce & Industries Department

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** 2008–09ನೇ ಸಾಲಿನಿಂದ "ಸಮೃದ್ಧ ಹಸಿರು ಗ್ರಾಮ ಯೋಜನೆ" ಯನ್ನು ಜಾರಿಗೊಳಿಸಲು ಸಮಿತಿ ರಚನೆ ಕುರಿತು.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪತ್ರ ಸಂಖ್ಯೆ: ಮುಅಸಂ(ಯೋ)/ಬಿಯುಡಿ/ಸಿಆರ್–45, 08–09, ದಿನಾಂಕ 25–8–2008 ಮತ್ತು 29–8–2008.

**ಪ್ರಸ್ತಾವನೆ:**

2008–09ನೇ ಆಯವ್ಯಯದಲ್ಲಿ ಪರಿಸರ ಸಮತೋಲನ ಕಾಪಾಡಲು ಅರಣ್ಯೀಕರಣ ಕಾರ್ಯಗತಗೊಳಿಸುವ ಬಗ್ಗೆ ನೈಸರ್ಗಿಕ ಸಂಪನ್ಮೂಲಗಳ ಲಭ್ಯತೆಯಲ್ಲಿ ಸ್ವಾವಲಂಬನೆ ಮತ್ತು ವೃಕ್ಷಹೊದಿಕೆಯನ್ನು ವೃದ್ಧಿಗೊಳಿಸುವ ದಿಸೆಯಲ್ಲಿ "ಸಮೃದ್ಧ ಹಸಿರು ಗ್ರಾಮ ಯೋಜನೆ" ಎಂಬ ವಿನೂತನ ಕಾರ್ಯಕ್ರಮವನ್ನು ಘೋಷಿಸಿದ್ದು, ಯೋಜನೆಯಲ್ಲಿ ಆಸಕ್ತಿಹೊಂದಿರುವ ಗ್ರಾಮ ಅರಣ್ಯ ಸಮಿತಿಗಳಲ್ಲಿ ಪ್ರತಿ ಜಿಲ್ಲೆಗೆ ಒಂದು ಗ್ರಾಮ ಅರಣ್ಯ ಸಮಿತಿಯನ್ನು ಆಯ್ಕೆ ಮಾಡಿ ಈ ಸಮಿತಿಯ ವ್ಯಾಪ್ತಿಯಲ್ಲಿ ಬರುವ ಗ್ರಾಮ/ಗ್ರಾಮಗಳನ್ನು ಈ ಕಾರ್ಯಕ್ರಮದಡಿಯಲ್ಲಿ ತಂದು ಎಲ್ಲಾ ಇಲಾಖೆಗಳ ಸಹಕಾರ ಮತ್ತು ಅನುದಾನದ ಮೂಲಕ "ಸಮೃದ್ಧ ಹಸಿರು ಗ್ರಾಮ ಯೋಜನೆ" ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಬೇಕಾಗಿದೆ.

ಮೇಲೆ ಓದಲಾದ ದಿನಾಂಕ 25–8–2008 ಮತ್ತು 29–8–2008ರ ಪತ್ರಗಳಲ್ಲಿ "ಸಮೃದ್ಧ ಹಸಿರು ಗ್ರಾಮ ಯೋಜನೆ" ಯನ್ನು ಜಿಲ್ಲಾಮಟ್ಟದಲ್ಲಿರುವ ವಿವಿಧ ಇಲಾಖೆಗಳು ಮತ್ತು ಯೋಜನೆಗಳ ಸಂಯೋಜನೆ ಮತ್ತು ಸಾಮೂಹಿಕ ಭಾಗವಹಿಸುವಿಕೆಯ ಮೂಲಕ ಆದ್ಯತಾ ಕಾರ್ಯಕ್ರಮವಾಗಿ ಅನುಷ್ಠಾನಗೊಳಿಸಬೇಕಾಗಿರುವುದರಿಂದ ವಿವಿಧ ಇಲಾಖೆಗಳ ಸಮನ್ವಯತೆಯನ್ನು ಸಾಧಿಸಿ ಎಲ್ಲಾ ಇಲಾಖೆಗಳ ಅನುದಾನ ಮತ್ತು ಸಹಕಾರವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಲು ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮನ್ವಯ ಸಮಿತಿಯನ್ನು ರಚಿಸಲು ಅನುಮೋದನೆ ನೀಡಬೇಕೆಂದು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, "ಸಮೃದ್ಧ ಹಸಿರು ಗ್ರಾಮ ಯೋಜನೆ"ಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಮತ್ತು ಆಯಾ ಜಿಲ್ಲೆಗಳ ವಿಧಾನಸಭೆ ಮತ್ತು ವಿಧಾನಪರಿಷತ್ತಿನ ಸದಸ್ಯರುಗಳನ್ನೊಳಗೊಂಡಂತೆ ಸಮಿತಿಯನ್ನು ರಚಿಸಲು ಸರ್ಕಾರವು ನಿರ್ಧರಿಸಿರುವ ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 135 ಎಫ್‌ಎಪಿ 2008, ಬೆಂಗಳೂರು, ದಿನಾಂಕ 4ನೇ ಡಿಸೆಂಬರ್ 2008.**

ಅರಣ್ಯ ಮತ್ತು ಇತರೆ ಇಲಾಖೆಗಳಲ್ಲಿ ಅನುಷ್ಠಾನಗೊಳ್ಳುತ್ತಿರುವ ಯೋಜನೆಗಳು ಸೇರಿದಂತೆ, ಜಿಲ್ಲಾ ಮಟ್ಟದಲ್ಲಿರುವ ವಿವಿಧ ಇಲಾಖೆಗಳು ಮತ್ತು ಯೋಜನೆಗಳ ಸಂಯೋಜನೆ ಮತ್ತು ವಿವಿಧ ಇಲಾಖೆಗಳು ಸಾಮೂಹಿಕವಾಗಿ ಭಾಗವಹಿಸುವ ಮೂಲಕ ಮತ್ತು ಪರಿಸರ ಸಮತೋಲನ ಕಾಪಾಡಲು ಅರಣ್ಯೀಕರಣ ಕಾರ್ಯಗತಗೊಳಿಸುವ ಬಗ್ಗೆ ನೈಸರ್ಗಿಕ ಸಂಪನ್ಮೂಲಗಳ ಲಭ್ಯತೆಯಲ್ಲಿ ಸ್ವಾವಲಂಬನೆ ಮತ್ತು ವೃಕ್ಷಹೊದಿಕೆಯನ್ನು ವೃದ್ಧಿಗೊಳಿಸುವ ದಿಸೆಯಲ್ಲಿ "ಸಮೃದ್ಧ ಹಸಿರು ಗ್ರಾಮ ಯೋಜನೆ" ಯನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಲು ಮತ್ತು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿನ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸಮಿತಿಯನ್ನು ಸರ್ಕಾರವು ರಚಿಸಿದೆ:

| | | |
|---|---|---|
| 1 | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾಪಂಚಾಯಿತಿ | ಸದಸ್ಯರು |
| 3 | ಜಂಟಿ ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |
| 4 | ಜಿಲ್ಲಾ ಜಲಾನಯನಾಭಿವೃದ್ಧಿ ಅಧಿಕಾರಿ | ಸದಸ್ಯರು |
| 5 | ಉಪ ನಿರ್ದೇಶಕರು, ತೋಟಗಾರಿಕೆ ಇಲಾಖೆ | ಸದಸ್ಯರು |
| 6 | ಉಪ ನಿರ್ದೇಶಕರು, ರೇಷ್ಮೆ ಇಲಾಖೆ | ಸದಸ್ಯರು |
| 7 | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಕಲ್ಯಾಣಾಭಿವೃದ್ಧಿ ಅಧಿಕಾರಿ | ಸದಸ್ಯರು |
| 8 | ಉಪ ನಿರ್ದೇಶಕರು, ಪಶುಸಂಗೋಪನಾ ಇಲಾಖೆ | ಸದಸ್ಯರು |
| 9 | ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ | ಸದಸ್ಯರು |
| 10 | ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ | ಸದಸ್ಯರು |
| 11 | ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ | ಸದಸ್ಯರು |
| 12 | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 13 | ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 14 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಮಾಜಿಕ ಅರಣ್ಯ ವಿಭಾಗ | ಸದಸ್ಯರು |
| 15 | ಸಂಬಂಧಿಸಿದ ತಹಶೀಲ್ದಾರರು | ಸದಸ್ಯರು |
| 16 | ಸಂಬಂಧಿಸಿದ ತಾಲ್ಲೂಕು ಪಂಚಾಯತ್ ಕಾರ್ಯ ನಿರ್ವಹಣಾಧಿಕಾರಿ | ಸದಸ್ಯರು |
| 17 | ಸಂಬಂಧಪಟ್ಟ ಜಿಲ್ಲೆಗಳ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 18 | ಉಪ ಅರಣ್ಯ ಸಂರಕ್ಷಣಾಧಿಕಾರಿ (ಪ್ರಾದೇಶಿಕ ಹಾಗೂ ಜಿಲ್ಲಾ ಕೇಂದ್ರ ಸ್ಥಾನ) | ಸದಸ್ಯ ಕಾರ್ಯದರ್ಶಿ |

ಚುನಾಯಿತ ಪ್ರತಿನಿಧಿಗಳು

| | | |
|---|---|---|
| 1 | ಯೋಜನಾ ವ್ಯಾಪ್ತಿಯ ಗ್ರಾಮ ಅರಣ್ಯ ಸಮಿತಿ ಅಧ್ಯಕ್ಷರು | ಸದಸ್ಯರು |
| 2 | ಯೋಜನಾ ವ್ಯಾಪ್ತಿಯ ಜಿಲ್ಲಾ ಪಂಚಾಯಿತಿ ಸದಸ್ಯ | ಸದಸ್ಯರು |
| 3 | ಯೋಜನಾ ವ್ಯಾಪ್ತಿಯ ತಾಲ್ಲೂಕು ಪಂಚಾಯಿತಿ ಸದಸ್ಯ | ಸದಸ್ಯರು |
| 4 | ಯೋಜನಾ ವ್ಯಾಪ್ತಿಯ ಗ್ರಾಮ ಪಂಚಾಯಿತಿ ಅಧ್ಯಕ್ಷರು | ಸದಸ್ಯರು |
| 5 | ಯೋಜನಾ ವ್ಯಾಪ್ತಿಯ ಸರ್ಕಾರೇತರ ಸಂಸ್ಥೆ ಪ್ರತಿನಿಧಿ* | ಸದಸ್ಯರು |

* (ಜಂಟಿ ಅರಣ್ಯ ಯೋಜನೆ ಮತ್ತು ನಿರ್ವಹಣೆ ಸರ್ಕಾರಿ ಆದೇಶ ದಿನಾಂಕ 19–6–2002ರಂತೆ – ಗ್ರಾಮ ಅರಣ್ಯ ಸಮಿತಿಯ ಶಿಫಾರಸ್ಸಿನ ಮೇರೆಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಂದ ನಾಮನಿರ್ದೇಶಿತನಾದ)

ಈ ಸಮಿತಿಯು ಪ್ರತಿ ತಿಂಗಳು ಸಭೆ ನಡೆಸತಕ್ಕದ್ದು. ಯೋಜನೆಯ ಎಲ್ಲಾ ಪ್ರಸ್ತಾವನೆಗಳ ಕುರಿತು ಪರಿಶೀಲಿಸಿ ಸಮಿತಿಯ ಸದಸ್ಯರುಗಳ ಅಭಿಪ್ರಾಯ / ಸಲಹೆಗಳನ್ನು ಪಡೆದು ಅನುಮೋದನೆ ನೀಡಲ್ಪಟ್ಟ ಯೋಜನಾ ಕಾರ್ಯಕ್ರಮಗಳನ್ನು ಸಕಾಲದಲ್ಲಿ ಅನುಷ್ಠಾನಗೊಳಿಸತಕ್ಕದ್ದು.

ಎಲ್ಲಾ ಜಿಲ್ಲಾಧಿಕಾರಿಗಳು, ವಿವಿಧ ಇಲಾಖೆಗಳೊಡನೆ ಸಮನ್ವಯತೆಯನ್ನು ಕಾಪಾಡುವುದರ ಜೊತೆಗೆ ಎಲ್ಲಾ ಇಲಾಖೆಗಳಲ್ಲಿ ಅನುಷ್ಠಾನದಲ್ಲಿರುವ ಯೋಜನೆಗಳ ಅನುದಾನವನ್ನು ಈ ಯೋಜನೆಯಡಿ ಬಳಸಿಕೊಳ್ಳುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.20

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## FOREST, ECOLOGY AND ENVIRONMENT SECRETARIAT

**Sub:** Repairs and routine maintenance of SH-17D-Mysore Mananthwadi road passing through the Rajeev Gandhi Park (Nagarhole), Karnataka Constitution of a Committee – reg.

**Read:**
1. Letter No. D/WL/CR-05/2001-02, dt: 26-10-2007 of the Principal Chief Conservator of Forests (Wildlife), Karnataka, Bangalore.
2. Letter No. F.No.6-43/2007 WL-1, dt: 4-10-2007 of the Government of India, Ministry of Environment and Forest.
3. Letter No. FEE 04 FWL 2007, dt: 30-10-2007.
4. Letter No. FEE 293 FWL 2007, dt: 14-1-2008.
5. Letters No. PIU/KSHIP/EMS/03/2008-09/1707, dt: 6-12-2008 and 26-11-2008 of the Project Director, Karnataka State Highway Improvement Project, Bangalore.
6. Letters No. D(D1)/WL/CR-5/2001-02, dt: 23-12-2008 and 17-1-2009 of the Principal Chief Conservator of Forests (Wildlife), Karnataka, Bangalore.

**Preamble:**

In the letter dt: 26-10-2007 read at (1) above, the Principal Chief Conservator of Forests (Wildlife) has requested the Government for permission to accord KSHIP to take up the works of repairs, routine maintenance of SH-17D-Mysore-Mananthwadi road passing through the Rajeev Gandhi National Park (Nagarahole), Karnataka subject to certain conditions.

2. In the letter dt: 4-10-2007 read at (2) above, the Government of India informed to the State Government that the proposal for repairs and routine maintenance of SH-17D-Mysore-Mananthwadi road passing through Rajeev Gandhi National Park was considered in the Standing Committee of the National Board for Wildlife and direct to take up works as per the existing directives of the Hon'ble Supreme Court and the provisions of Forests (Conservation) Act 1980.

3. In the letter dt: 30-10-2007 read at (3) above, the Government of Karnataka has directed the Principal Chief Conservator of Forests (Wildlife) to take necessary action in the matter in accordance with the Government of India letter read at (2) above.

4. In the meanwhile one Sri V.T. Ravindra of Bangalore has filed an application on 28-11-2007 bearing No. 1064 before the Central Empowered Committee against the Union of India and the Chief Secretary to Government of Karnataka to stop the work of repairs and maintenance of SH-17D-Mysore-Mananthwadi road passing through the Rajeev Gandhi National Park.

5. The Government of Karnataka in its letter dt: 14-1-2008 read at (4) above has filed a submission before the CEC praying to dismiss the Application of Sri V.T. Ravindra as the necessary precautions have been taken up and procedures have been followed.

6. In the letters read at (5) above, the Chief Project Officer, Karnataka State Highway Improvement Project has requested the Government to constitute the committee and accord permission, to take up the road repair work inside the Rajeev Gandhi National Park.

7. In the letters Nos. dt: 23-12-2008 and 17-1-2009 read at (6) above the Principal Chief Conservator of Forests (Wildlife) has informed that the Hon'ble Supreme Court of India in its order dt: 19-11-2008 have recommended for considering to take up the repairs and routine maintenance of SH-17D-Mysore-Mananthwadi road passing through the Rajeev Gandhi National Park (Nagarahole), Karnataka subject to fulfillment of the conditions as recommended by the Central Empowered Committee and in this context the CEC among other conditions has directed to constitute monitoring committee comprising of the following members to monitor the repair works till its completion and also the mitigative majors:

| Sl. No. | Members | |
|---|---|---|
| 1 | The Principal Secretary to Government, Forest, Ecology and Environment Department, Government of Karnataka, Bangalore | Chairman |
| 2 | Representative of the Principal Secretary to Government, Public Works Department, Government of Karnataka, i.e. Superintending Engineer, Public Works Department, Mysore | Member |
| 3 | Representative of the Principal Chief Conservator of Forests, i.e. The Chief Conservator of Forests, Project Tiger, Mysore | Member |
| 4 | Representative of the Central for Wildlife Studies (NGO), Bangalore | Member |
| 5 | Representative of Coorg Wildlife Society (NGO), Madikeri | Member |

Hence the following order:

**G.O. No. FEE 276 FWL 2008, Bangalore, Dated: 28th January 2009**

In the circumstances explained in the preamble, Government is pleased to constitute a monitoring committee comprising of following members to monitor the repairs and routine maintenance of SH-17D-Mysore-Mananthwadi road passing through the Rajeev Gandhi National Park (Nagarahole), Karnataka subject to fulfillment of the conditions as recommended by the Central Empowered Committee:

| Sl. No. | Members | |
|---|---|---|
| 1 | The Principal Secretary to Government, Forest, Ecology and Environment Department, Government of Karnataka, Bangalore | Chairman |
| 2 | Representative of the Principal Secretary to Government, Public Works Department, Government of Karnataka, i.e. Superintending Engineer, Public Works Department, Mysore | Member |
| 3 | Representative of the Principal Chief Conservator of Forests, i.e. The Chief Conservator of Forests, Project Tiger, Mysore | Member |

| | | |
|---|---|---|
| 4 | Representative of the Central for Wildlife Studies (NGO), Bangalore | Member |
| 5 | Representative of Coorg Wildlife Society (NGO), Madikeri | Member |

By order and in the name of the Governor of Karnataka,

P.R.503

**H.M. MALLIKARJUNASWAMY**
Under Secretary to Government,
Forest, Ecology & Environment Department

## HEALTH AND FAMILY WELFARE SECRETARIAT

**Subject:** Deputation of Dr. Murali Krishna P.V. to Karnataka Institute of Diabetology, to "study on effects of walking in prevention and control of diabetics".

**Preamble:**

Diabetes is a life style disease that has been striking the general public at an alarming rate with devastating effect on the health of the individuals. In this regard Dr. Murali Krishna P.V. intends to conduct a "study on effects of walking in prevention and control of diabetics" at Karnataka Institute of Diabetology, Bangalore.

Dr. Murali Krishna P.V. has submitted a theory with the fact that changes in the walking style has reduced the muscle bulk of the individual putting load on the pancreas in production of insulin. This higher load is the basis for the onset of diabetes mellitus.

To carry out further study, it is considered to depute him to the Karnataka Institute of Diabetology, Bangalore, two days in a week for a period of three years to undertake the study. He shall keep the Government informed on the progress of the study once in a month.

Hence the order.

**Government Order No. HFW (PR) 46 WBA 2009, Bangalore, Dated 5th March 2009**

Under the circumstances explained in the preamble, Government are pleased to depute Dr. Murali Krishna P.V. Deputy Director (PHCF), KHSDRP, to Karnataka Institute of Diabetology, Bangalore to conduct the "study on effects of walking in prevention and control of diabetics" for two days in a week for a period of three years with immediate effect.

This will not have any financial implications on the Government exchequer.

By order and in the name of the Governor of Karnataka,

P.R.830

**SUSHAMA GODBOLE**
Deputy Secretary to Government, KHSDRP,
Health & Family Welfare Department

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** 2007–08ನೇ ಸಾಲಿನ ಆಯವ್ಯಯ ಭಾಷಣದನ್ವಯ ಮಂಜೂರಾದ 52 ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಿಗೆ ಮಂಜೂರಾಗಿರುವ ಹುದ್ದೆಗಳಿಗೆ ವೇತನ ಶ್ರೇಣಿ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಕಇ 50 ಮೊದೇಶಾ 07, ದಿನಾಂಕ 13–6–2007.
2. ಸರ್ಕಾರದ ಆದೇಶ ಸಂಖ್ಯೆ: ಸಕಇ 50 ಮೊದೇಶಾ 07 (ಭಾ), ದಿನಾಂಕ 28–11–2007.
3. ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕವಶಿಸಸ/ಸಿಆರ್ (ಶಿಕ್ಷಣ)–21/2007–08/120, ದಿನಾಂಕ 1–1–2008 ಮತ್ತು 20–5–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ 2007–08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿದಂತೆ ಪರಿಶಿಷ್ಟ ಜಾತಿಯ 25, ಪರಿಶಿಷ್ಟ ವರ್ಗದ 5 ಮತ್ತು ಹಿಂದುಳಿದ ವರ್ಗದ 22 ಹೀಗೆ ಒಟ್ಟು 52 ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಆ ಆದೇಶದಲ್ಲಿ ಕಾಣಿಸಿರುವ ಸ್ಥಳಗಳಲ್ಲಿ ಪ್ರಾರಂಭಿಸಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ. (2)ರ ಆದೇಶದಲ್ಲಿ ಸದರಿ 52 ವಸತಿ ಶಾಲೆಗಳಿಗೆ 2007–08ನೇ ಸಾಲಿನಿಂದ ವರ್ಷಾವಾರು 2011–12ನೇ ಸಾಲಿನವರೆಗೆ (5 ವರ್ಷಗಳಿಗೆ) ಅವಶ್ಯವಿರುವ 1300 ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕಾರ್ಯನಿರ್ವಾಹಕ ನಿರ್ದೇಶಕರು 2007–08ನೇ ಸಾಲಿನಲ್ಲಿ ಪ್ರಾರಂಭಿಸಲಾಗಿರುವ 52 ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಿಗೆ ಅವಶ್ಯವಿರುವ 1300 ಹುದ್ದೆಗಳನ್ನು ಮಂಜೂರು ಮಾಡಲಾಗಿದೆ. ಆದರೆ ಸದರಿ ಆದೇಶದಲ್ಲಿ ಮಂಜೂರಾಗಿರುವ ಹುದ್ದೆಗಳಿಗೆ ವೇತನ ಶ್ರೇಣಿ ನಮೂದಿಸದೇ ಇರುವುದರಿಂದ ಅಪೆಂಡೆಕ್ಸ್ ಬಿ ಯಲ್ಲಿ ಹುದ್ದೆಗಳನ್ನು ಅಳವಡಿಸಿಕೊಳ್ಳಲು ತೊಂದರೆಯಾಗುವುದರಿಂದ ವೇತನ ಶ್ರೇಣಿಗೆ ಹುದ್ದೆಗಳನ್ನು ಮಂಜೂರು ಮಾಡುವ ಬಗ್ಗೆ ಆದೇಶ ಹೊರಡಿಸುವಂತೆ ಪ್ರಸ್ತಾವನೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 50 ಮೊದೇಶಾ 2007 (ಭಾ), ಬೆಂಗಳೂರು, ದಿನಾಂಕ 3ನೇ ಡಿಸೆಂಬರ್ 2008.**

2007–08ನೇ ಸಾಲಿನಲ್ಲಿ ಮಂಜೂರಾಗಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಟ ಜಾತಿಯ 25, ಪರಿಶಿಷ್ಟ ವರ್ಗದ 5 ಮತ್ತು ಹಿಂದುಳಿದ ವರ್ಗದ 22 ಹೀಗೆ ಒಟ್ಟು 52 ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಿಗೆ ಒಟ್ಟು 1300 ಹುದ್ದೆಗಳನ್ನು ಮಂಜೂರು ಮಾಡಿ ಆದೇಶಿಸಲಾಗಿದ್ದು, ಈ ಕೆಳಕಂಡ ಸದರಿ ಹುದ್ದೆಗಳ ಮುಂದೆ ತೋರಿಸಿರುವ ವೇತನ ಶ್ರೇಣಿಯನ್ನು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನಿಗಧಿಪಡಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಗಳು | ವೇತನ ಶ್ರೇಣಿ | ಒಟ್ಟು ಹುದ್ದೆಗಳು |
|---|---|---|---|
| 1 | ಪ್ರಾಂಶುಪಾಲರು | 11400–21600 | 52 |
| 2 | ಭಾಷಾ ಶಿಕ್ಷಕರು | | |
| | ಕನ್ನಡ | 8825–16000 | 52 |
| | ಹಿಂದಿ/ಉರ್ದು | 8825–16000 | 52 |
| | ಆಂಗ್ಲ | 8825–16000 | 52 |
| 3 | ವಿಷಯ ಶಿಕ್ಷಕರು | | |
| | ಗಣಿತ (ಪಿಸಿಎಂಬಿ) | 8825–16000 | 52 |
| | ವಿಜ್ಞಾನ (ಸಿಬಿಜಡ್) | 8825–1000 | 52 |
| | ಸಮಾಜ ವಿಜ್ಞಾನ (ಆರ್ಟ್ಸ್) | 8825–16000 | 52 |
| 4 | ದೈಹಿಕ ಶಿಕ್ಷಕರು | 8825–16000 | 52 |
| 5 | ಗಣಕಯಂತ್ರ ಶಿಕ್ಷಕರು | 8825–16000 | 52 |
| 6 | ಕ್ರಾಫ್ಟ್ ಶಿಕ್ಷಕರು | 8000–14800 | 52 |
| 7 | ಸಂಗೀತ ಶಿಕ್ಷಕರು | 8000–14800 | 52 |
| 8 | ಸ್ಟಾಫ್ ನರ್ಸ್ | 8000–14800 | 52 |
| 9 | ಪ್ರಥಮ ದರ್ಜೆ ಸಹಾಯಕರು (ಗಣಕಯಂತ್ರ ಜ್ಞಾನವುಳ್ಳವರು) | 7275–13350 | 52 |
| 10 | ನಿಲಯಪಾಲಕರು | 7275–13350 | 52 |
| 11 | ಅಡುಗೆಯವರು | 5200–8200 | 156 |
| 12 | ಅಡುಗೆ ಸಹಾಯಕರು | 4800–7275 | 104 |
| 13 | ಗ್ರೂಪ್–ಡಿ | 4800–7275 | 52 |
| 14 | ಕಾವಲುಗಾರರು | 4800–7275 | 104 |
| 15 | ಸ್ವಚ್ಛತಾ ಸಿಬ್ಬಂದಿ | 4800–7275 | 156 |
| | | **ಒಟ್ಟು** | **1300** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 590 ವೆಚ್ಚ–3/07, ದಿನಾಂಕ 13–11–2007ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.81

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–1, ಸಮಾಜ ಕಲ್ಯಾಣ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ಆಡಳಿತ ಮಂಡಳಿ ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಆಕುಕ 79 ಪಿಟಿಡಿ 2004, ದಿನಾಂಕ 10-5-2004 & 7-7-2005.

2. ನಿರ್ದೇಶಕರು, ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು ಇವರ ಏಕಕಡತ ಟಿಪ್ಪಣಿ ಸಂಖ್ಯೆ: ಇಂಗಾಮಆಸಂ/ಆಆ/2/2008-09, ದಿನಾಂಕ 20-9-2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ಸರ್ಕಾರದ ಆದೇಶದಲ್ಲಿ, ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆಯ ಆಡಳಿತ ಮಂಡಳಿಯನ್ನು ರಚಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (2)ರ ನಿರ್ದೇಶಕರ ಪತ್ರದಲ್ಲಿ, ಸದರಿ ಆಡಳಿತ ಮಂಡಳಿಯ ಅವಧಿಯು 03 ವರ್ಷಗಳದ್ದಾಗಿದ್ದು, ಪುನಃ ಆಡಳಿತ ಮಂಡಳಿಯನ್ನು ಪುನರ್ ರಚಿಸಲು ಕೋರಿರುತ್ತಾರೆ. ಆದ್ದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 332 ಪಿಟಿಡಿ 2008, ಬೆಂಗಳೂರು, ದಿನಾಂಕ 14ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ 03 ವರ್ಷದ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1) | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು,<br>ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು-560 001 | ಅಧ್ಯಕ್ಷರು |
| 2) | ಸರ್ಕಾರದ ಕಾರ್ಯದರ್ಶಿಗಳು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ), ವಿಧಾನಸೌಧ, ಬೆಂಗಳೂರು-560 001. | ಉಪಾಧ್ಯಕ್ಷರು |
| 3) | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು-560 001 | ಸದಸ್ಯರು |
| 4) | ಸರ್ಕಾರದ ಕಾರ್ಯದರ್ಶಿಗಳು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಧಾನಸೌಧ,<br>ಬೆಂಗಳೂರು-560 001 | ಸದಸ್ಯರು |
| 5) | ಸರ್ಕಾರದ ಕಾರ್ಯದರ್ಶಿಗಳು,<br>ಯೋಜನಾ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು-560 001 | ಸದಸ್ಯರು |
| 6) | ಆಯುಕ್ತರು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಆನಂದರಾವ್ ವೃತ್ತ, ಬೆಂಗಳೂರು-9 | ಸದಸ್ಯರು |
| 7) | ನಿರ್ದೇಶಕರು,<br>ವೈದ್ಯಕೀಯ ಶಿಕ್ಷಣ, ಆನಂದರಾವ್ ವೃತ್ತ, ಬೆಂಗಳೂರು-9 | ಸದಸ್ಯರು |
| 8) | ಅಪರ ಕಾರ್ಯದರ್ಶಿ / ಜಂಟಿ ಕಾರ್ಯದರ್ಶಿ,<br>ವೈದ್ಯಕೀಯ ಶಿಕ್ಷಣ ಇಲಾಖೆ | ಸದಸ್ಯರು |
| | **ಅಧಿಕಾರೇತರ ಸದಸ್ಯರು** | |
| 1) | ವಿಧಾನಸಭಾ ಸದಸ್ಯರು,<br>ಚಿಕ್ಕಪೇಟೆ ವಿಧಾನಸಭಾ ಕ್ಷೇತ್ರ, ಬೆಂಗಳೂರು | ಸದಸ್ಯರು |
| 2) | ಶ್ರೀ ಬಿ.ಎಲ್.ಎಸ್. ಮೂರ್ತಿಯವರು,<br>ನಂ. 144, 5ನೇ ಮುಖ್ಯ ರಸ್ತೆ, ಚಾಮರಾಜಪೇಟೆ, ಬೆಂಗಳೂರು-18 | ಸದಸ್ಯರು |
| 3) | ಶ್ರೀ ವಿಜಯ್ ಸಿ. ಕಪೂರ್,<br>ಶ್ರೀ ಹರನಾಮ್‌ದಾಸ್ ಕಪೂರ್ ಟ್ರಸ್ಟ್, ರಜಲ್ ಮಾರ್ಕೆಟ್, ಬೆಂಗಳೂರು | ಸದಸ್ಯರು |

| | | |
|---|---|---|
| 4) | ಶ್ರೀ ವಿ.ಎಸ್. ಕೃಷ್ಣ ಅಯ್ಯರ್,<br>ಮಾಜಿ ಲೋಕಸಭಾ ಸದಸ್ಯರು, ಸಿ.23, ಶಂಕರ್ ಪಾರ್ಕ್, ಶಂಕರಪುರಂ, ಬೆಂಗಳೂರು–4. | ಸದಸ್ಯರು |
| 5) | ಡಾ: ಡಿ.ಜಿ. ಬೆನಕಪ್ಪ,<br>ಮಕ್ಕಳ ತಜ್ಞರು, 788, 34ನೇ ಎ ಅಡ್ಡರಸ್ತೆ, 4ನೇ ಹಂತ, ಜಯನಗರ, ಬೆಂಗಳೂರು–11. | ಸದಸ್ಯರು |
| 6) | ಡಾ: ಸುಭಾಷ್ ಭರಣಿ,<br>ನಿವೃತ್ತ ಐ.ಪಿ.ಎಸ್. ಅಧಿಕಾರಿ, ನಂ. 23, 8ನೇ 'ಎ' ಮುಖ್ಯರಸ್ತೆ, ಆರ್.ಎಂ.ವಿ. ವಿಲಾಸ್ ಎಕ್ಸ್‌ಟೆನ್ಷನ್, ಸದಾಶಿವನಗರ, ಬೆಂಗಳೂರು–80 | ಸದಸ್ಯರು |
| 7) | ಶ್ರೀ ಅಜಯ್ ಗೋವಿಂದರಾಜ್,<br>ವಕೀಲರು, 101, ರಮಣಶ್ರೀ ಛೇಂಬರ್ಸ್, ಲೇಡಿ ಕರ್ಜನ್ ರಸ್ತೆ, ಬೆಂಗಳೂರು–1 | ಸದಸ್ಯರು |
| 8) | ನಿರ್ದೇಶಕರು,<br>ಇಂದಿರಾಗಾಂಧಿ ಮಕ್ಕಳ ಆರೋಗ್ಯ ಸಂಸ್ಥೆ, ಬೆಂಗಳೂರು–29 | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.87

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿ ಔಷಧ ಪರೀಕ್ಷಾ ಪ್ರಯೋಗಾಲಯಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 99 ಐಎಂಎಂ 2008, ದಿನಾಂಕ 4–10–2008.
2. ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಔನಿಇ/ 23/ಲೆಪವಿ/2008–09, ದಿನಾಂಕ 25–10–2008.
3. ಸರ್ಕಾರದ ಆದೇಶ ಸಂಖ್ಯೆ: ಆಇ 2352 ವೆಚ್ಚ–5/2008, ದಿನಾಂಕ 19–11–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿನ ಸರ್ಕಾರದ ಆದೇಶದಲ್ಲಿ, ಹುಬ್ಬಳ್ಳಿ ಮತ್ತು ಬಳ್ಳಾರಿಗಳಲ್ಲಿ ಸ್ಥಾಪಿಸಲಾಗುವ ಪ್ರತಿ ಔಷಧ ಪರೀಕ್ಷಾ ಪ್ರಯೋಗಾಲಯಕ್ಕೆ 61 ವಿವಿಧ ತಾಂತ್ರಿಕ ಸಿಬ್ಬಂದಿ ಮತ್ತು 37 ಪೂರಕ ಸಿಬ್ಬಂದಿ ಒಟ್ಟು 98 ಹುದ್ದೆಗಳನ್ನು ಸೃಜಿಸಲು ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

ಮೇಲೆ ಓದಲಾದ ಕ್ರ.ಸಂ. (2)ರ ಪತ್ರದಲ್ಲಿ, ಔಷಧ ನಿಯಂತ್ರಕರು, ಬೆಂಗಳೂರು ಇವರು ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿ ತಕ್ಷಣದಿಂದ ಒಂದೊಂದು ಶಾಖೆಯೊಂದಿಗೆ ಬಾಡಿಗೆ ಕಟ್ಟಡದಲ್ಲಿ ಔಷಧ ಪರೀಕ್ಷಾ ಪ್ರಯೋಗಾಲಯಗಳನ್ನು ಪ್ರಾರಂಭಿಸಲಾಗುವುದೆಂದು ತಿಳಿಸಿ, ಸದರಿ ಪರೀಕ್ಷಾ ಪ್ರಯೋಗಾಲಯದಲ್ಲಿ ಕಾರ್ಯ ನಿರ್ವಹಿಸಲು ಬೆಂಗಳೂರಿನಲ್ಲಿರುವ ಕೆಲವು ಸಿಬ್ಬಂದಿಗಳನ್ನು ಈ ಎರಡು ಉದ್ದೇಶಿತ ಪ್ರಯೋಗಾಲಯಗಳಿಗೆ ವರ್ಗಾಯಿಸಿ ಅವರ ಸಂಬಳ, ಬಟವಾಡೆ ಇತ್ಯಾದಿ ಎಲ್ಲಾ ಪ್ರಕಾರದ ಖರ್ಚುಗಳನ್ನು ಮಾಡಲು ಸೂಕ್ತ ಉಪ ಲೆಕ್ಕ ಶೀರ್ಷಿಕೆಗಳ ಅವಶ್ಯಕತೆಯಿದ್ದು ಸದರಿ ಉಪ ಲೆಕ್ಕಶೀರ್ಷಿಕೆಗಳಲ್ಲಿ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ಸಂಬಂಧಿಸಿದ ಪ್ರಯೋಗಾಲಯದ ಅಧೀಕ್ಷಕರುಗಳನ್ನು ನೇಮಿಸಲು ಕೋರಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ಆರ್ಥಿಕ ಇಲಾಖೆಯು ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿ ಔಷಧ ಪರೀಕ್ಷಾ ಪ್ರಯೋಗಾಲಯವನ್ನು ಸ್ಥಾಪಿಸಲು 2008–09ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ (ಹೊಸ ಶೀರ್ಷಿಕೆ) 4210–03–105–2–03–386 (ಯೋಜನೆ) (ಎಎಫ್ಎಸ್) ಅಡಿಯಲ್ಲಿ ಒದಗಿಸಿರುವ ಒಟ್ಟು ರೂ. 500 ಲಕ್ಷಗಳಲ್ಲಿ ರೂ. 100 ಲಕ್ಷಗಳನ್ನು ಸರ್ಕಾರಕ್ಕೆ ಅಧ್ಯರ್ಪಿಸಿಕೊಂಡಿರುತ್ತದೆ.

ಆದುದರಿಂದ, ಬಳ್ಳಾರಿ ಮತ್ತು ಹುಬ್ಬಳ್ಳಿಯಲ್ಲಿನ ಔಷಧ ಪರೀಕ್ಷಾ ಪ್ರಯೋಗಾಲಯಗಳಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಗಳಿಗೆ ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ಆ ಪ್ರಯೋಗಾಲಯದ ಅಧೀಕ್ಷಕರುಗಳನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 99 ಐಎಂಎಂ 2008, ಬೆಂಗಳೂರು, ದಿನಾಂಕ 26ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿನ ಔಷಧ ಪರೀಕ್ಷಾ ಪ್ರಯೋಗಾಲಯದಲ್ಲಿ 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ (ಹೊಸ ಶೀರ್ಷಿಕೆ) 2210–06–104–0–12 (ಯೋಜನೆ) ಅಡಿಯಲ್ಲಿ ಒದಗಿಸಿರುವ ಆಯವ್ಯಯದಲ್ಲಿ ಬಳ್ಳಾರಿ ಮತ್ತು ಹುಬ್ಬಳ್ಳಿಯಲ್ಲಿನ ಔಷಧ ಪರೀಕ್ಷಾ ಪ್ರಯೋಗಾಲಯಗಳಿಗೆ ತಲಾ ರೂ. 50.00 ಲಕ್ಷಗಳಂತೆ (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಹೊಸ ರೆವೆನ್ಯೂ ಲೆಕ್ಕ ಶೀರ್ಷಿಕೆಗಳಡಿಯಲ್ಲಿ ಈ ಕೆಳಕಂಡಂತೆ ಹೆಚ್ಚುವರಿ ಅನುದಾನವಾಗಿ ಸರ್ಕಾರವು ಒದಗಿಸಿದೆ.

**ಲೆಕ್ಕ ಶೀರ್ಷಿಕೆ 2210–06–104–0–12 (ಯೋಜನೆ) ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ** **(ರೂ. ಲಕ್ಷಗಳಲ್ಲಿ)**

| | | |
|---|---|---|
| –002 | ವೇತನ ಅಧಿಕಾರಿಗಳು | –1.65 |
| –003 | ವೇತನ–ಸಿಬ್ಬಂದಿ | –2.37 |
| –011 | ತುಟ್ಟಿ ಭತ್ಯೆ | –1.07 |
| –014 | ಇತರೆ ಭತ್ಯೆ | –0.31 |
| –041 | ಪ್ರಯಾಣ ವೆಚ್ಚಗಳು | –1.00 |
| –051 | ಸಾಮಾನ್ಯ ವೆಚ್ಚಗಳು | –13.00 |
| –052 | ದೂರವಾಣಿ ವೆಚ್ಚ | –1.00 |
| –053 | ಪೀಠೋಪಕರಣಗಳ ಖರೀದಿ | –10.00 |
| –071 | ಕಟ್ಟಡ ವೆಚ್ಚಗಳು | –2.50 |
| –180 | ಯಂತ್ರೋಪಕರಣಗಳು & ಸಾಧನ ಸಾಮಗ್ರಿಗಳು | –10.00 |
| –200 | ನಿರ್ವಹಣೆ | –1.10 |
| –221 | ಸಾಮಗ್ರಿ ಮತ್ತು ಸರಬರಾಜು | –6.00 |
| | **ಒಟ್ಟು** | **–50.00** |

**ಹೊಸ ಲೆಕ್ಕ ಶೀರ್ಷಿಕೆ 2210–06–104–0–13 (ಯೋಜನೆ) ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ** **(ರೂ. ಲಕ್ಷಗಳಲ್ಲಿ)**

| | | |
|---|---|---|
| –002 | ವೇತನ ಅಧಿಕಾರಿಗಳು | –1.65 |
| –003 | ವೇತನ–ಸಿಬ್ಬಂದಿ | –2.37 |
| –011 | ತುಟ್ಟಿ ಭತ್ಯೆ | –1.07 |
| –014 | ಇತರೆ ಭತ್ಯೆ | –0.31 |
| –041 | ಪ್ರಯಾಣ ವೆಚ್ಚಗಳು | –1.00 |
| –051 | ಸಾಮಾನ್ಯ ವೆಚ್ಚಗಳು | –14.00 |
| –052 | ದೂರವಾಣಿ ವೆಚ್ಚ | –1.00 |
| –053 | ಪೀಠೋಪಕರಣಗಳ ಖರೀದಿ | –10.00 |
| –071 | ಕಟ್ಟಡ ವೆಚ್ಚಗಳು | –1.50 |
| –180 | ಯಂತ್ರೋಪಕರಣಗಳು & ಸಾಧನ ಸಾಮಗ್ರಿಗಳು | –10.00 |
| –200 | ನಿರ್ವಹಣೆ | –1.10 |
| –221 | ಸಾಮಗ್ರಿ ಮತ್ತು ಸರಬರಾಜು | –6.00 |
| | **ಒಟ್ಟು** | **–50.00** |

ಈ ಹೆಚ್ಚುವರಿ ರೂ. 100.00 ಲಕ್ಷಗಳನ್ನು 2008–09ನೇ ಸಾಲಿನ ಪೂರಕ ಅಂದಾಜುಗಳು–2ನೇ ಕಂತಿನಲ್ಲಿ ಸಕ್ರಮಗೊಳಿಸಲಾಗುವುದು. ಪೂರಕ ಅಂದಾಜುಗಳು–2ನೇ ಕಂತು ಸಕ್ರಮಗೊಂಡ ನಂತರವೇ ಹಣ ಬಿಡುಗಡೆ ಗೊಳಿಸಲಾಗುವುದು.

ಬಳ್ಳಾರಿ ಮತ್ತು ಹುಬ್ಬಳ್ಳಿಯಲ್ಲಿನ ಔಷಧ ಪರೀಕ್ಷಾ ಪ್ರಯೋಗಾಲಯಗಳಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಗಳಿಗೆ ಅಧೀಕ್ಷಕರು, ಬಳ್ಳಾರಿ ಮತ್ತು ಹುಬ್ಬಳ್ಳಿಗಳಲ್ಲಿನ ಔಷಧ ಪರೀಕ್ಷಾ ಪ್ರಯೋಗಾಲಯ ಇವರನ್ನು ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಗಳನ್ನಾಗಿ ನೇಮಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2352 ವೆಚ್ಚ–5/2008, ದಿನಾಂಕ 22–11–2008 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.88

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ:** ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿನ ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯಗಳನ್ನು ಪ್ರಾರಂಭಿಸಲು ತಾಂತ್ರಿಕ ಮತ್ತು ಇತರೆ ಸಿಬ್ಬಂದಿಯನ್ನು ರಿ–ಡಿಪ್ಲಾಯ್‌ಮೆಂಟ್ ಮೂಲಕ ನಿಯೋಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 99 ಐಎಂಎಂ 2008, ದಿನಾಂಕ 4–10–2008.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 99 ಐಎಂಎಂ 2008, ದಿನಾಂಕ 26–11–2008.
3. ಸರ್ಕಾರದ ಆದೇಶ ಸಂಖ್ಯೆ: ಆಕುಕ 111 ಐಎಂಎಂ 2007, ದಿನಾಂಕ 1–12–2008.
4. ಸರ್ಕಾರದ ಆದೇಶ ಸಂಖ್ಯೆ: ಆಕುಕ 99 ಐಎಂಎಂ 2008, ದಿನಾಂಕ 8–12–2008 & 10–12–2008.
5. ಔಷಧ ನಿಯಂತ್ರಕರು, ಔಷಧ ನಿಯಂತ್ರಣ ಇಲಾಖೆ, ಬೆಂಗಳೂರು ಇವರ ಏಕಕಡತ ಸಂಖ್ಯೆ: ಔನಿಇ/ 249/ಸಿಬ್ಬಂದಿ/2008–09.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿನ ಸರ್ಕಾರದ ಆದೇಶದಲ್ಲಿ, ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿ ರೂ. 1500–00 ಲಕ್ಷಗಳಲ್ಲಿ ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯಗಳನ್ನು 2008–09ನೇ ಸಾಲಿನಲ್ಲಿ ಸ್ವಂತ ಕಟ್ಟಡ ನಿರ್ಮಾಣ ಮಾಡುವವರೆಗೆ ಒಂದೊಂದು ಶಾಖೆಯೊಂದಿಗೆ ಬಾಡಿಗೆ ಕಟ್ಟಡದಲ್ಲಿ ಪ್ರಾರಂಭಿಸಲು ಹಾಗೂ ಪ್ರತಿ ಔಷಧ ಪರೀಕ್ಷಾ ಪ್ರಯೋಗಾಲಯಕ್ಕೆ 61 ವಿವಿಧ ತಾಂತ್ರಿಕ ಸಿಬ್ಬಂದಿ ಮತ್ತು 37 ಪೂರಕ ಸಿಬ್ಬಂದಿ ಒಟ್ಟು 98 ಹುದ್ದೆಗಳನ್ನು ಸೃಜಿಸಿ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

ಮೇಲೆ ಓದಲಾದ ಕ್ರ.ಸಂ. (2)ರಲ್ಲಿನ ಸರ್ಕಾರದ ಆದೇಶದಲ್ಲಿ, ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿನ ಔಷಧ ಪರೀಕ್ಷಾ ಪ್ರಯೋಗಾಲಯಗಳಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿಗಳಿಗೆ, ಕ್ರಮವಾಗಿ ಹುಬ್ಬಳ್ಳಿ ಮತ್ತು ಬಳ್ಳಾರಿಗಳಲ್ಲಿನ ಔಷಧ ಪರೀಕ್ಷಾ ಪ್ರಯೋಗಾಲಯಗಳ ಅಧೀಕ್ಷಕರುಗಳನ್ನು ಹಣ ಸೆಳೆಯುವ ಮತ್ತು ಬಟವಾಡೆ ಅಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (3)ರಲ್ಲಿನ ಸರ್ಕಾರದ ಆದೇಶದಲ್ಲಿ, ಔಷಧ ಪರೀಕ್ಷಾ ಪ್ರಯೋಗಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧೀಕ್ಷಕರು, ಸೀನಿಯರ್ ಕೆಮಿಸ್ಟ್, ಜೂನಿಯರ್ ಕೆಮಿಸ್ಟ್ ಹುದ್ದೆಗಳನ್ನು ಚೀಫ್ ಸೈಂಟಿಫಿಕ್ ಆಫೀಸರ್, ಸೈಂಟಿಫಿಕ್ ಆಫೀಸರ್ ಮತ್ತು ಜೂನಿಯರ್ ಸೈಂಟಿಫಿಕ್ ಆಫೀಸರ್ ಎಂದು ಮರು ಪದನಾಮೀಕರಿಸಿ ಸರ್ಕಾರದ ಅನುಮೋದನೆಯನ್ನು ನೀಡಿದೆ.

ಮೇಲೆ ಓದಲಾದ ಕ್ರ.ಸಂ. (4)ರಲ್ಲಿನ ಸರ್ಕಾರದ ಆದೇಶಗಳಲ್ಲಿ, ಹುಬ್ಬಳ್ಳಿ ಮತ್ತು ಬಳ್ಳಾರಿಯ ಔಷಧ ಪರೀಕ್ಷಾ ಪ್ರಯೋಗಾಲಯಗಳನ್ನು ಹೊಸ ಕಟ್ಟಡ ನಿರ್ಮಾಣ ಮಾಡುವವರೆಗೆ ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸಲು ಅನುಕೂಲವಾಗುವಂತೆ ಬಾಡಿಗೆ ಕಟ್ಟಡಗಳನ್ನು ಮತ್ತು ಅವುಗಳ ಸಭಾಂಗಣವನ್ನು ಪ್ರಯೋಗಾಲಯಕ್ಕೆ ತಕ್ಕಂತೆ ಸುಸಜ್ಜಿತಗೊಳಿಸಲು ಮತ್ತು ಹೊಸ ಕಟ್ಟಡ ಕಾಮಗಾರಿಗೆ ತಲಾ ರೂ. 1.00 ಕೋಟಿಯನ್ನು ಬಿಡುಗಡೆ ಮಾಡಿದೆ.

ಮೇಲೆ ಓದಲಾದ ಕ್ರ.ಸಂ. (5)ರಲ್ಲಿನ ಏಕಕಡತ ಪದ್ಧತಿಯಲ್ಲಿನ ಟಿಪ್ಪಣಿಯಲ್ಲಿ ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿ ಒಂದೊಂದು ಶಾಖೆಯೊಂದಿಗೆ ಪ್ರಯೋಗಾಲಯವನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದ್ದು, ಸದರಿ ಪ್ರಯೋಗಾಲಯಗಳನ್ನು ಸೂಕ್ತ ಸಮಯದಲ್ಲಿ ಪ್ರಾರಂಭಿಸಲು ಸದರಿ ಪ್ರಯೋಗಾಲಯಗಳಲ್ಲಿ ಸೃಜಿಸಲಾದ ತಾಂತ್ರಿಕ ಸಿಬ್ಬಂದಿ ಮತ್ತು ಪೂರಕ ಸಿಬ್ಬಂದಿಗಳನ್ನು ಶಾಶ್ವತವಾಗಿ ತುಂಬುವವರೆಗೆ ಬಾಡಿಗೆ ಕಟ್ಟಡದಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಕೂಡಲೇ ಪ್ರಾರಂಭಿಸಲು

ಇಲಾಖೆಯಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಕೆಲವು ಸಿಬ್ಬಂದಿಗಳನ್ನು ರಿ–ಡಿಪ್ಲಾಯ್‌ಮೆಂಟ್ ಮೂಲಕ ತುಂಬಲು ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿನ ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯಗಳನ್ನು 2008–09ನೇ ಸಾಲಿನಲ್ಲಿ ಪ್ರಾರಂಭಿಸಬೇಕಾಗಿರುವುದರಿಂದ, ಸದರಿ ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯಗಳಿಗೆ ಮಂಜೂರಾಗಿರುವ ಹುದ್ದೆಗಳನ್ನು ತುಂಬುವವರೆಗೆ ಔಷಧ ನಿಯಂತ್ರಣ ಇಲಾಖೆಯಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಕೆಲವು ತಾಂತ್ರಿಕ ಮತ್ತು ಪೂರಕ ಸಿಬ್ಬಂದಿಗಳನ್ನು ರಿ–ಡಿಪ್ಲಾಯ್‌ಮೆಂಟ್ ಮೂಲಕ ತುಂಬಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 154 ಐಎಂಎಂ 2008, ಬೆಂಗಳೂರು, ದಿನಾಂಕ 15ನೇ ಡಿಸೆಂಬರ್ 2008.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಹುಬ್ಬಳ್ಳಿ ಮತ್ತು ಬಳ್ಳಾರಿಯಲ್ಲಿನ ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯಗಳನ್ನು 2008–09ನೇ ಸಾಲಿನಲ್ಲಿ ಪ್ರಾರಂಭಿಸಲು ಸದರಿ ಪ್ರಾದೇಶಿಕ ಔಷಧ ಪರೀಕ್ಷಾ ಪ್ರಯೋಗಾಲಯಗಳಿಗೆ ಬೆಂಗಳೂರಿನಲ್ಲಿರುವ ಔಷಧ ಪ್ರಯೋಗಾಲಯದಲ್ಲಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳನ್ನು/ ನೌಕರರುಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಹಾಗೂ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಮರುವಿನ್ಯಾಸದ (On Redeployment) ಮೂಲಕ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿ / ಸಿಬ್ಬಂದಿ ಹೆಸರು ಮತ್ತು ಪದನಾಮ | ರಿ–ಡಿಪ್ಲಾಯ್‌ಮೆಂಟ್ ಮೂಲಕ ನೇಮಕ ಮಾಡಲಾದ ಸ್ಥಳ |
|---|---|---|
| | **ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ** | |
| 1 | ಶ್ರೀಮತಿ ಪಾರ್ವತಿ ಆನಂದಗೌಡರ್, ಚೀಫ್ ಸೈಂಟಿಫಿಕ್ ಆಫೀಸರ್, ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ – ಹೊಸದಾಗಿ ಸೃಜನೆಗೊಂಡ ಚೀಫ್ ಸೈಂಟಿಫಿಕ್ ಆಫೀಸರ್ ಹುದ್ದೆಗೆ |
| 2 | ಶ್ರೀ ಎಮ್.ಎಸ್. ಲೋಕೇಶ ಪ್ರಸಾದ, ಜೂನಿಯರ್ ಸೈಂಟಿಫಿಕ್ ಆಫೀಸರ್, ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ – ಹೊಸದಾಗಿ ಸೃಜನೆಗೊಂಡ ಜೂನಿಯರ್ ಸೈಂಟಿಫಿಕ್ ಆಫೀಸರ್ ಹುದ್ದೆಗೆ |
| 3 | ಶ್ರೀ ವೈ.ಕೆ. ಚಿದಾನಂದ ಪ್ರಯೋಗಶಾಲಾ ತಂತ್ರಜ್ಞ (ಔಷಧ), ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ – ಹೊಸದಾಗಿ ಸೃಜನೆಗೊಂಡ ಪ್ರಯೋಗ ಶಾಲಾ ತಂತ್ರಜ್ಞ (ಔಷಧ) ಹುದ್ದೆಗೆ |
| 4 | ಶ್ರೀಮತಿ ಸೀಮಾ ಶೆಟ್ಟಿ, ಪ್ರಯೋಗಶಾಲಾ ತಂತ್ರಜ್ಞ, ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ – ಹೊಸದಾಗಿ ಸೃಜನೆಗೊಂಡ ಉಗ್ರಾಣ ಪಾಲಕರು ಹುದ್ದೆಗೆ |
| 5 | ಶ್ರೀ ಎಚ್. ಶ್ರೀನಿವಾಸ ಪ್ರಯೋಗಶಾಲಾ ಪರಿಚಾರಕರು, ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ – ಹೊಸದಾಗಿ ಸೃಜನೆಗೊಂಡ ಪ್ರಯೋಗ ಶಾಲಾ ಪರಿಚಾರಕರು ಹುದ್ದೆಗೆ |
| 6 | ಶ್ರೀ ಅಬ್ದುಲ ವಹಾಬ ರಾಹುತ, ಬೆರಳಚ್ಚುಗಾರರು, ಗುಲ್ಬರ್ಗಾ ವೃತ್ತ (ಬೆರಳಚ್ಚುಗಾರರ ಹುದ್ದೆಯಿಂದ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ಅವರ ಕೋರಿಕೆಯ ಮೇರೆಗೆ ಬದಲಾವಣೆಯ ಅನುಮತಿಯೊಂದಿಗೆ) | ಔಷಧ ಪರೀಕ್ಷಾ ಪ್ರಯೋಗಾಲಯ, ಹುಬ್ಬಳ್ಳಿ – ಹೊಸದಾಗಿ ಸೃಜನೆಗೊಂಡ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ |
| | **ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ** | |
| 7 | ಶ್ರೀ ಎಸ್.ಎನ್. ಶಿವಶಂಕರ, ಸೈಂಟಿಫಿಕ್ ಆಫೀಸರ್, ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ – ಹೊಸದಾಗಿ ಸೃಜನೆಗೊಂಡ ಸೈಂಟಿಫಿಕ್ ಆಫೀಸರ್ ಹುದ್ದೆಗೆ |
| 8 | ಶ್ರೀಮತಿ ಶೈಲಾವತಿ, ಜೂನಿಯರ್ ಸೈಂಟಿಫಿಕ್ ಆಫೀಸರ್, ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ – ಹೊಸದಾಗಿ ಸೃಜನೆಗೊಂಡ ಜೂನಿಯರ್ ಸೈಂಟಿಫಿಕ್ ಆಫೀಸರ್ ಹುದ್ದೆಗೆ |

| | | |
|---|---|---|
| 9 | ಶ್ರೀ ನಾಗರಾಜ ಸುಂಕದ್, ಜೂನಿಯರ್ ಸೈಂಟಿಫಿಕ್ ಆಫೀಸರ್, ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ – ಹೊಸದಾಗಿ ಸೃಜನೆಗೊಂಡ ಜೂನಿಯರ್ ಸೈಂಟಿಫಿಕ್ ಆಫೀಸರ್ ಹುದ್ದೆಗೆ |
| 10 | ಶ್ರೀ ಲಕ್ಷ್ಮೀಕಾಂತಯ್ಯ, ಪ್ರಯೋಗಶಾಲಾ ತಂತ್ರಜ್ಞ (ಔಷಧ), ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ – ಹೊಸದಾಗಿ ಸೃಜನೆಗೊಂಡ ಪ್ರಯೋಗ ಶಾಲಾ ತಂತ್ರಜ್ಞ (ಔಷಧ) ಹುದ್ದೆಗೆ |
| 11 | ಶ್ರೀ ಎಚ್.ಆರ್. ಸಂತೋಷಕುಮಾರ, ಪ್ರಯೋಗಶಾಲಾ ತಂತ್ರಜ್ಞ, ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ – ಹೊಸದಾಗಿ ಸೃಜನೆಗೊಂಡ ಉಗ್ರಾಣ ಪಾಲಕರು ಹುದ್ದೆಗೆ |
| 12 | ಶ್ರೀ ಎಸ್. ವೆಂಕಟೇಶಪ್ಪ, ಪ್ರಯೋಗಶಾಲಾ ಪರಿಚಾರಕರು, ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ – ಹೊಸದಾಗಿ ಸೃಜನೆಗೊಂಡ ಪ್ರಯೋಗ ಶಾಲಾ ಪರಿಚಾರಕರು ಹುದ್ದೆಗೆ |
| 13 | ಶ್ರೀ ದತ್ತಪ್ಪ ಶಂಕರಪ್ಪ ಸಿನ್ನೂರ, ದ್ವಿತೀಯ ದರ್ಜೆ ಸಹಾಯಕರು, ಸರ್ಕಾರಿ ಔಷಧ ವಿಜ್ಞಾನ ಮಹಾ ವಿದ್ಯಾಲಯ, ಬೆಂಗಳೂರು | ಔಷಧ ಪರೀಕ್ಷಾ ಪ್ರಯೋಗಾಲಯ, ಬಳ್ಳಾರಿ – ಹೊಸದಾಗಿ ಸೃಜನೆಗೊಂಡ ದ್ವಿತೀಯ ದರ್ಜೆ ಸಹಾಯಕರು ಹುದ್ದೆಗೆ |

ತಾಂತ್ರಿಕ ಸಿಬ್ಬಂದಿಯವರಿಗೆ ಸಂಬಂಧಪಟ್ಟಂತೆ ಈ ಮರುವಿನ್ಯಾಸವು (Redeployment) ತಾತ್ಕಾಲಿಕವಾಗಿ ಆರು (06) ತಿಂಗಳ ಮಟ್ಟಿಗೆ ಅಥವಾ ನಿಯಮಾನುಸಾರ ಈ ಹುದ್ದೆಗಳನ್ನು ತುಂಬುವವರೆಗೆ ಮಾತ್ರ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.126

**ಎನ್. ಮಹಾಲಕ್ಷ್ಮಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಶ್ರೀ ಯಮುನಪ್ಪ ಆರ್. ಭಜಂತ್ರಿ, ರೇಷ್ಮೆ ಪ್ರದರ್ಶಕರು ಇವರ ಪರಿವೀಕ್ಷಣಾ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಅಧಿಕೃತ ಜ್ಞಾಪನ ಸಂಖ್ಯೆ: ಸಿಬ್ಬಂದಿ1(8)/ಪಪೂಅ/184/2006–07, ದಿನಾಂಕ 24–10–2008.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸಿಬ್ಬಂದಿ1(8)/ಪಪೂಅ/184/2006–07, ದಿನಾಂಕ 24–10–2008.

**ಪ್ರಸ್ತಾವನೆ:**

ಶ್ರೀ ಯಮುನಪ್ಪ ಆರ್. ಭಜಂತ್ರಿ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಚಿಲಕವಾಡಿ ಇವರು ದಿನಾಂಕ 29–5–2004ರಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಇವರ ಪರೀಕ್ಷಾ ಪೂರ್ವ ಅವಧಿಯನ್ನು ದಿನಾಂಕ 28–5–2006ರಂದು ಘೋಷಿಸಬೇಕಾಗಿತ್ತು. ಆದರೆ ಸದರಿಯವರು ನಿಗಧಿಪಡಿಸಿದ ಇಲಾಖಾ ಪರೀಕ್ಷೆಗಳನ್ನು ವಿಳಂಬವಾಗಿ ಪಾಸು ಮಾಡಿಕೊಂಡಿರುವುದರಿಂದ ಇವರ ಪರೀಕ್ಷಾ ಪೂರ್ವ ಅವಧಿಯನ್ನು ದಿನಾಂಕ 29–5–2006 ರಿಂದ 2–8–2007ರ ವರೆಗೆ ವಿಸ್ತರಿಸಬೇಕಾಗಿರುತ್ತದೆ. ನೇಮಕಾತಿ ಪ್ರಾಧಿಕಾರವಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(1)(ii) ರನ್ವಯ ಇರುವ ಅಧಿಕಾರ ವ್ಯಾಪ್ತಿಯಂತೆ ನೌಕರರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 29–5–2006 ರಿಂದ 28–5–2007 ರವರೆಗೆ ವಿಸ್ತರಿಸಿ, ಉಳಿದ ಅವಧಿಗೆ ಅಂದರೆ ದಿನಾಂಕ 29–5–2007 ರಿಂದ 2–8–2007 ರವರೆಗೆ ಸದರಿ ನಿಯಮಗಳ ನಿಯಮ 4(1)(i)ರಂತೆ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ ನೌಕರರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 172 ರೇಇವಿ 2008, ಬೆಂಗಳೂರು, ದಿನಾಂಕ 22ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಯಮುನಪ್ಪ ಆರ್. ಭಜಂತ್ರಿ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಚಿಲಕವಾಡಿ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 29–5–2007 ರಿಂದ 2–8–2007 ರವರೆಗೆ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 4(1)(i) ರನ್ವಯ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.26

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದರಡಿ, 2008–09ನೇ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಗೆ ಎರಡನೇ ಕಂತಿನ ರಾಜ್ಯದ ಪಾಲನ್ನು ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ :** ಕೇಂದ್ರ ಸರ್ಕಾರದ ಪತ್ರದ ಸಂ. ಜೆ–12022/4/2008–ಎನ್.ಆರ್.ಇ.ಜಿ.ಎ.–ಎಸ್.ಎಲ್.ನಂ. 382 ದಿ: 1–12–2008.

**ಪ್ರಸ್ತಾವನೆ :**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನಕ್ಕಾಗಿ ಉಲ್ಲೇಖಿತ ಪತ್ರದಲ್ಲಿ ಕೇಂದ್ರ ಸರ್ಕಾರವು ಬಳ್ಳಾರಿ ಜಿಲ್ಲೆಗೆ ರೂ. 398.86 ಲಕ್ಷಗಳನ್ನು ಎರಡನೇ ಕಂತಾಗಿ ನೇರವಾಗಿ ಬಿಡುಗಡೆ ಮಾಡಿ, ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಹದಿನೈದು ದಿನಗಳೊಳಗಾಗಿ ಬಿಡುಗಡೆ ಮಾಡುವಂತೆ ಆದೇಶಿಸಿರುತ್ತದೆ. 2008–09ನೇ ಸಾಲಿನಲ್ಲಿ ಸದರಿ ಯೋಜನೆಗೆ ಆಯವ್ಯಯದಲ್ಲಿ ಅನುದಾನವನ್ನು ರಾಜ್ಯದ ಪಾಲಾಗಿ, ಸಾಮಗ್ರಿಗಳ ಬಳಕೆಗಾಗಿ ಶೇಕಡ 10ರಷ್ಟಾಗಿ ಬಿಡುಗಡೆ ಮಾಡಲು ಒದಗಿಸಲಾಗಿರುತ್ತದೆ. ಆದುದರಿಂದ, ಪ್ರಸ್ತುತ ಸಾಲಿನಲ್ಲಿ ಬಳ್ಳಾರಿ ಜಿಲ್ಲೆಗೆ, ಉದ್ಯೋಗ ಖಾತರಿ ಯೋಜನೆಯಡಿ, ಸಾಮಗ್ರಿಗಳ ಘಟಕದ ಬಳಕೆಗಾಗಿ, ಶೇಕಡಾ 10ರಷ್ಟಾದ ರೂ. 39.886 ಲಕ್ಷಗಳನ್ನು ಅನುಬಂಧದಲ್ಲಿ ನಮೂದಿಸಿದಂತೆ, ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 121 ಉಖಾಯೋ 08 ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಅನುದಾನಕ್ಕೆ ಅನುಗುಣವಾಗಿ ರಾಜ್ಯದ ಪಾಲನ್ನು ಎರಡನೇ ಕಂತಿನ ಅನುದಾನವಾದ ರೂ. 39.886 ಲಕ್ಷಗಳನ್ನು (ರೂ. ಮೂವತ್ತೊಂಭತ್ತು ಲಕ್ಷ ಎಂಭತ್ತೆಂಟು ಸಾವಿರದ ಆರು ನೂರು ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಬಳ್ಳಾರಿ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂ: ಎಫ್‌ಡಿ 7 ಜೆಡ್ಪಿಎ 2003, ದಿನಾಂಕ 14–7–2005 ಮತ್ತು ಸರ್ಕಾರದ ಸುತ್ತೋಲೆ ಸಂ. ಆಇ 1 ಜಿಪಅ 07, ದಿನಾಂಕ 19–1–2007ರಲ್ಲಿನ ಸೂಚನೆಗಳನ್ವಯ ಈ ಕೆಳಕಂಡ ಲೆಕ್ಕಶೀರ್ಷಿಕೆಯಡಿ ಪೇಯಿಸ್ ರಸೀದಿಯ ಮೇಲೆ ಖಜಾನೆಯಿಂದ ಅನುದಾನ ಪಡೆದು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿ ವೆಚ್ಚವನ್ನು ಭರಿಸತಕ್ಕದ್ದು.

2008–09ನೇ ಸಾಲಿನ ರಾಷ್ಟ್ರಿಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಲೆಕ್ಕಶೀರ್ಷಿಕೆ "2505 ಗ್ರಾಮೀಣ ಉದ್ಯೋಗ 02 ಗ್ರಾಮೀಣ ಉದ್ಯೋಗ ಖಾತರಿ ಯೋಜನೆ 101–ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಕಾರ್ಯಕ್ರಮ 0–01 ಕರ್ನಾಟಕ ಗ್ರಾಮೀಣ ಉದ್ಯೋಗ ಭರವಸೆ ಯೋಜನೆ –059 ಇತರೆ ಖರ್ಚು (ಯೋಜನೆ)" (2505–02–101–0–01–059).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ 1–2–2007ರಂದು ಅಧಿಸೂಚಿಸಿರುವ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ– ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು. ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮತ್ತು ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಗಳ ಕಾರ್ಯನಿರ್ವಾಹಕ ಅಧಿಕಾರಿಗಳು, ಉಸ್ತುವಾರಿ, ಅನುಷ್ಠಾನ ಮತ್ತು ಜಾಗೃತಿ ಇವುಗಳನ್ನು ಚಲಾಯಿಸುವ ಸಂಪೂರ್ಣ ಜವಾಬ್ದಾರಿ ಅವರುಗಳದಾಗಿರುತ್ತದೆ.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಗ್ರಾಅಪ 530 ಪಿಬಿಎಸ್ 2008, ದಿನಾಂಕ 23–12–2008ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಪಿ.ಸಿ. ಜಾಫರ್**

ನಿರ್ದೇಶಕರು, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ
ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ANNEXURE TO G.O. No. RDP 121 NRE 2008, BANGALORE, DATED 27-12-2008**
**Statement showing the releases of IInd installment of state share of funds under NREGA during 2008-09**

(Rs. In lakhs)

| Sl. No. | District | Central share directly to ZP | | State share proposed for release as per Column No.4 | Funds being released in this Order |
|---|---|---|---|---|---|
| | | Date | Amount | | |
| 1 | 2 | 3 | 4 | 5 | 6 |
| 1 | Bellary | 1-12-2008 | 398.86 | 39.886 | 39.886 |

**Dr. P.C. JAFFER**

P.R. 266

Director, National Rural Employment Guarantee Scheme
& E/o. Dy. Secretary to Government,
Rural Development & Panchayat Raj Department

## ಸಹಕಾರ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಿಒ 12 ಸಿಎಂಎಲ್ 2009, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2009.**

ಸರ್ಕಾರದ ಆದೇಶ ಸಂಖ್ಯೆ: ಸಿಒ 12 ಸಿಎಲ್ಎಂ 2009, ದಿನಾಂಕ 17–1–2009ರಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ (4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ರಿಂದ ಮಾರ್ಪಾಟು ಮಾಡಿ ದಿನಾಂಕ 31–3–2009ರೊಳಗೆ ಚುನಾವಣೆ ನಡೆಸಬೇಕಾದ ಸಹಕಾರ ಸಂಘಗಳಿಗೆ ಚುನಾವಣಾ ದಿನಾಂಕಗಳನ್ನು ನಿಗದಿಪಡಿಸಿದ್ದು, ಸದರಿ ಆದೇಶ ಭಾಗದಲ್ಲಿನ ಕ್ರಮಸಂಖ್ಯೆ 01ರಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಸಹಕಾರ ಸಂಘಗಳ ಆಡಳಿತ ಸಮಿತಿಗಳಿಗೆ ಚುನಾವಣೆ ನಡೆಸಬೇಕಾದ ಅವಧಿಯನ್ನು "ದಿನಾಂಕ 16–3–2009 ರಿಂದ 20–3–2009 ರೊಳಗೆ" ಎಂದು ನಿಗದಿಪಡಿಸಿದ್ದು ಅದನ್ನು "ದಿನಾಂಕ 22–3–2009ರೊಳಗೆ" ಎಂದು ತಿದ್ದುಪಡಿ ಮಾಡಿದ್ದು ಅದರಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.523

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮಕ್ಕೆ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 388 ಎಲ್‌ಜಿಬಿ 2008, ದಿ: 29–8–2008.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 388 ಎಲ್‌ಜಿಬಿ 2008, ದಿ: 8–9–2008.
3. ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ವಿಜಿ (ಜಾದ) ಸಿಬ್ಬಂದಿ ಸಿಆರ್/ 07/08–09, ದಿ: 16–9–2008 ಮತ್ತು 19–12–2008.
4. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 518 ಎಲ್‌ಜಿಬಿ 2008, ದಿ: 22–1–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶ ದಿ: 29–8–2008ರಲ್ಲಿ ಬೆಂಗಳೂರು ನಗರ ಜಿಲ್ಲೆಯೂ ಸೇರಿದಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಸರ್ಕಾರಿ ಜಮೀನುಗಳನ್ನು ಸಂರಕ್ಷಿಸಲು, ಅವಶ್ಯವಿದ್ದಲ್ಲಿ ಅಭಿವೃದ್ಧಿ ಪಡಿಸಲು ಮತ್ತು ಅವುಗಳನ್ನು ಸ್ಪರ್ಧಾತ್ಮಕವಾಗಿ ವಿಲೇ ಮಾಡಿ ಸಂಪನ್ಮೂಲಗಳನ್ನು ಸಂಗ್ರಹಿಸಲು ಹಾಗೂ ಹಂಚಿಕೆ ಮಾಡಲು ಕಂಪನೀಸ್ ಆಕ್ಟ್ ಅಡಿಯಲ್ಲಿ ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮವನ್ನು ಸ್ಥಾಪಿಸಲಾಗಿರುತ್ತದೆ. ಅಲ್ಲದೇ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶ ದಿ: 8–9–2008ರಲ್ಲಿ ಈ ನಿಗಮಕ್ಕೆ ನಿರ್ದೇಶಕರುಗಳನ್ನು ನೇಮಕ ಮಾಡಲಾಗಿರುತ್ತದೆ.

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಪತ್ರದಲ್ಲಿ ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮಕ್ಕೆ ಹುದ್ದೆಗಳನ್ನು ಸೃಜಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿನ ಸರ್ಕಾರದ ಆದೇಶ ದಿ: 22–1–2009ರಲ್ಲಿ ಈ ನಿಗಮಕ್ಕೆ ಹಲವು ಹುದ್ದೆಗಳನ್ನು ವಿಶೇಷ ಜಿಲ್ಲಾಧಿಕಾರಿಗಳು (ಜಾರಿದಳ) ಇಲ್ಲಿಂದ ಸ್ಥಳಾಂತರಿಸಲಾಗಿರುತ್ತದೆ.

ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮಕ್ಕೆ ಹಲವು ಹುದ್ದೆಗಳನ್ನು ಸೃಜಿಸುವ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 518 ಎಲ್‌ಜಿಬಿ 2008, ಬೆಂಗಳೂರು, ದಿನಾಂಕ: 23ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಾರ್ವಜನಿಕ ಜಮೀನುಗಳ ನಿಗಮಕ್ಕೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

| ಕ್ರ.ಸ. | ಪದನಾಮ (ವೇತನ ಶ್ರೇಣಿ) | ಸೃಜಿಸಲಾದ ಹುದ್ದೆಗಳ ಸಂಖ್ಯೆ | ಹುದ್ದೆಗೆ ಆಯ್ಕೆ ಮಾಡುವ ವಿಧಾನ |
|---|---|---|---|
| 1 | ವ್ಯವಸ್ಥಾಪಕ ನಿರ್ದೇಶಕರು (ರೂ. 37400–63700) | 1 | ಸೀನಿಯರ್ / ಸೂಪರ್ ಟೈಮ್ ಸ್ಕೇಲ್ ಐ.ಎ.ಎಸ್., ವೃಂದದಿಂದ |
| 2 | ಕಂಪನಿ ಕಾರ್ಯದರ್ಶಿ (ಸಂಚಿತ ವೇತನ ತಿಂಗಳಿಗೆ ರೂ. 20000/– ರಂತೆ) | 1 | ಔಟ್‌ಸೋರ್ಸ್ ಮೂಲಕ ಅಥವಾ ಗುತ್ತಿಗೆ ಆಧಾರದ ಮೇಲೆ |
| 3 | ಜನರಲ್ ಮ್ಯಾನೇಜರ್ (ರೂ. 20025–28275) | 1 | ಕೆ.ಎ.ಎಸ್., ಸೀನಿಯರ್ ಸ್ಕೇಲ್ |
| 4 | ಮುಖ್ಯ ಲೆಕ್ಕಾಧಿಕಾರಿ (ರೂ. 20025–28275) | 1 | ರಾಜ್ಯ ಲೆಕ್ಕಪತ್ರ ಇಲಾಖೆಯಿಂದ |
| 5 | ಸಹಾಯಕ ಆಯುಕ್ತರು (ರೂ. 15200–25650) | 1 | ಕೆ.ಎ.ಎಸ್. |
| 6 | ತಹಶೀಲ್ದಾರ್ (ರೂ. 11400–21600) | 2 | ಕೆ.ಎ.ಎಸ್. |
| | ಒಟ್ಟು | 7 | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 47 ವೆಚ್ಚ–7/09, ದಿ: 23–1–2009ರಲ್ಲಿ ನೀಡಿದ ಸಹಮತಿ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.410

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಂಜೂರಾತಿ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2008–09ನೇ ಸಾಲಿನ ಶಾಸನಬದ್ಧ ಅನುದಾನದ ಮೂರನೇ ತ್ರೈಮಾಸಿಕ ಕಂತನ್ನು ಗ್ರಾಮ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 129 ಗ್ರಾಪಂಕಾ 2002(3), ದಿನಾಂಕ 2–12–2003.
2. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 234 ಗ್ರಾಪಂಅ 2007, ದಿನಾಂಕ 27–3–2008.

3. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 363 ವೆಚ್ಚ–6/2008, ದಿನಾಂಕ 14–5–2008.
4. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 168 ಗ್ರಾಪಂಅ 2008, ದಿನಾಂಕ 20–5–2008.
5. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 112 ವೆಚ್ಚ–6/2008, ದಿನಾಂಕ 6–8–2008.
6. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 168 ಗ್ರಾಪಂಅ 2008, ದಿನಾಂಕ 8–8–2008.
7. ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ: ಆಇ 112 ವೆಚ್ಚ–6/2008, ದಿನಾಂಕ 2–12–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆಯಾಗುವ ಸರ್ಕಾರದ ಅನುದಾನವನ್ನು ರಾಜ್ಯ ಹುಜೂರು ಖಜಾನೆಯಿಂದ ಪೇಯೀಸ್ ರಸೀದಿ ಮೇಲೆ ಪಡೆದು ರಾಷ್ಟ್ರೀಕೃತ ಬ್ಯಾಂಕುಗಳ ಮುಖಾಂತರ ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲು ಸರ್ಕಾರದ ಅಧೀನ ಕಾರ್ಯದರ್ಶಿ (ಜಿಪಂ) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆರವರಿಗೆ ಸರ್ಕಾರವು ಆದೇಶಿಸಿದೆ.

2008–09ನೇ ಸಾಲಿಗೆ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಶಾಸನಬದ್ಧ ಅನುದಾನವನ್ನು ಆಯವ್ಯಯ ಲೆಕ್ಕಶೀರ್ಷಿಕೆ 2515–00–198–1–07 (ಯೋಜನೆ) ಅಡಿ ಒಟ್ಟಾರೆ ರೂ. 34,219.61 ಲಕ್ಷಗಳನ್ನು ಒದಗಿಸಲಾಗಿದೆ. ಈ ಅನುದಾನದಿಂದ ಪ್ರತಿ ಗ್ರಾಮ ಪಂಚಾಯತಿಗೆ ವಾರ್ಷಿಕವಾಗಿ ತಲಾ ರೂ. 6.00 ಲಕ್ಷಗಳು ಲಭ್ಯವಾಗುತ್ತದೆ. ಈ ಸಾಲಿನ ಮೊದಲನೇ ತ್ರೈಮಾಸಿಕ ವೆಚ್ಚಕ್ಕಾಗಿ ಪ್ರಸ್ತಾಪಿತ ಲೆಕ್ಕಶೀರ್ಷಿಕೆಯಿಂದ ಒಟ್ಟು ರೂ. 8442.00 ಲಕ್ಷಗಳನ್ನು ಆರ್ಥಿಕ ಇಲಾಖೆಯು ಮೇಲೆ ಓದಲಾದ (3)ರಲ್ಲಿನ ಟಿಪ್ಪಣಿಯಲ್ಲಿ ಸಹಮತಿ ನೀಡಿದ್ದು, ಓದಲಾದ (4)ರಲ್ಲಿ ತಿಳಿಸಿರುವ ಸರ್ಕಾರದ ಆದೇಶದಲ್ಲಿ ಪ್ರತಿ ಗ್ರಾಮ ಪಂಚಾಯಿತಿಗೆ ಪ್ರತಿ ಕಂತಿಗೆ ರೂ. 1.50 ಲಕ್ಷಗಳಂತೆ ಒಟ್ಟು ರೂ. 8442.00 ಲಕ್ಷಗಳನ್ನು ಬಿಡುಗಡೆಗೊಳಿಸಿ, ಸಂಬಂಧಿಸಿದ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮೂಲಕ ಗ್ರಾಮ ಪಂಚಾಯಿತಿಗಳಿಗೆ ವಿತರಿಸಲಾಗಿದೆ. ಓದಲಾದ (6)ರಲ್ಲಿ ತಿಳಿಸಿರುವ ಸರ್ಕಾರದ ಆದೇಶದಲ್ಲಿ ಪ್ರತಿ ಗ್ರಾಮ ಪಂಚಾಯಿತಿಗೆ ಪ್ರತಿ ಕಂತಿಗೆ ರೂ. 1.50 ಲಕ್ಷಗಳಂತೆ ಒಟ್ಟು ರೂ. 8442.00 ಲಕ್ಷಗಳನ್ನು ಎರಡನೇ ತ್ರೈಮಾಸಿಕ ಕಂತಿನ ಅನುದಾನವನ್ನು ಬಿಡುಗಡೆಗೊಳಿಸಿ, ಸಂಬಂಧಿಸಿದ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮೂಲಕ ಗ್ರಾಮ ಪಂಚಾಯಿತಿಗಳಿಗೆ ವಿತರಿಸಲಾಗಿದೆ. ಓದಲಾದ (7)ರ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು 2008–09ನೇ ಸಾಲಿನ ಶಾಸನಬದ್ಧ ಅನುದಾನದ 3ನೇ ಕಂತಾಗಿ ರೂ. 8442.00 ಲಕ್ಷಗಳನ್ನು ಬಿಡುಗಡೆ ಮಾಡಲು ಸಹಮತಿಸಿರುತ್ತದೆ. ಸದರಿ ಅನುದಾನವನ್ನು ಪ್ರಸ್ತುತ ರಾಜ್ಯದಲ್ಲಿರುವ 5628 ಗ್ರಾಮ ಪಂಚಾಯಿತಿಗಳಿಗೆ ಮೇಲೆ ಓದಲಾದ (2)ರ ಸರ್ಕಾರದ ಆದೇಶದಂತೆ, ಶೇಕಡಾ 40ರಷ್ಟನ್ನು ಗ್ರಾಮ ಪಂಚಾಯಿತಿಗಳ ಸಿಬ್ಬಂದಿ ವೇತನ ಮತ್ತು ಶೇಕಡಾ 60ರಷ್ಟನ್ನು ಗ್ರಾಮ ಪಂಚಾಯಿತಿಗಳ ಅಕ್ಟೋಬರ್ 2008 ರಿಂದ ಡಿಸೆಂಬರ್ 2008ರ ಅವಧಿಯ ವಿದ್ಯುತ್ ಬಿಲ್ ಪಾವತಿಸಲು ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 168 ಗ್ರಾಪಂಅ 2008, ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರತಿ ಗ್ರಾಮ ಪಂಚಾಯಿತಿಗೆ 2008–09ನೇ ಸಾಲಿನ ಶಾಸನಬದ್ಧ ಅನುದಾನದ ಮೂರನೇ ತ್ರೈಮಾಸಿಕ ಕಂತಿನ ಮೊತ್ತ ರೂ. 8442.00 ಲಕ್ಷಗಳನ್ನು (ಎಂಭತ್ತನಾಲ್ಕು ಕೋಟಿ ನಲವತ್ತೆರಡು ಲಕ್ಷ ರೂಪಾಯಿಗಳು ಮಾತ್ರ) 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2515–00–198–1–07 (ಯೋಜನೆ) ಅಡಿಯಲ್ಲಿ ಬಿಡುಗಡೆ ಮಾಡಿ ಆದೇಶಿಸಿದೆ. ಈ ಅನುದಾನದ ಮೊತ್ತವನ್ನು ಪೇಯೀಸ್ ರಸೀದಿಯ ಮೇಲೆ ಪಡೆದು ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು ನಗರ ನೀರು ಸರಬರಾಜು ಮಂಡಳಿ ಶಾಖೆ, ಮೈಸೂರು ಬ್ಯಾಂಕ್ ವೃತ್ತ, ಬೆಂಗಳೂರು, ಇಲ್ಲಿ ತೆರೆದಿರುವ ಖಾತೆಯ ಮುಖಾಂತರ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ತಲಾ ರೂ. 1.50 ಲಕ್ಷದಂತೆ ಮೂರನೇ ತ್ರೈಮಾಸಿಕ ಕಂತಿನ ಅನುದಾನವನ್ನು ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿನ ಷರತ್ತುಗಳನ್ನು ಪಾಲಿಸುವ ನಿಬಂಧನೆಗಳಿಗೊಳಪಟ್ಟು, ಶೇಕಡಾ 40ರಷ್ಟನ್ನು ಗ್ರಾಮ ಪಂಚಾಯಿತಿಗಳ ಸಿಬ್ಬಂದಿ ವೇತನ ಮತ್ತು ಶೇಕಡಾ 60ರಷ್ಟನ್ನು ಗ್ರಾಮ ಪಂಚಾಯಿತಿಗಳ ಅಕ್ಟೋಬರ್ 2008 ರಿಂದ ಡಿಸೆಂಬರ್ 2008ರ ಅವಧಿಯ ವಿದ್ಯುತ್ ಬಿಲ್ ಪಾವತಿಸಲು ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಮುಖಾಂತರ ಬಿಡುಗಡೆ ಮಾಡಿ ಆದೇಶಿಸಿದೆ.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ: ಆಇ 112 ವೆಚ್ಚ–6/2008, ದಿನಾಂಕ 2–12–2008ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.317

**ಸ್ವರ್ಣಲತ ಎಂ. ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಗುತ್ತಿಗೆ ಉಪನ್ಯಾಸಕರ ಸೇವೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 387 ಪಿಟಿಡಿ 2007, ದಿನಾಂಕ 19–2–2008.

2. ಸರ್ಕಾರದ ಆದೇಶ ಸಂಖ್ಯೆ: ಆಕುಕ 177 ಪಿಟಿಡಿ 2007, ದಿನಾಂಕ 7–9–2007.

3. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/91/ಸಿಬ್ಬಂದಿ(1)/2008–09, ದಿನಾಂಕ 2–12–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ, ಹೋಮಿಯೋಪತಿ, ಯುನಾನಿ ಮತ್ತು ಪ್ರಕೃತಿ ಚಿಕಿತ್ಸೆ ಹಾಗೂ ಯೋಗ ಮಹಾವಿದ್ಯಾಲಯ, ಬೆಂಗಳೂರು ಮತ್ತು ಮೈಸೂರು ಇಲ್ಲಿ ಖಾಲಿ ಇರುವ ಉಪನ್ಯಾಸಕರುಗಳ (ಹೋಮಿಯೋಪತಿ), (ಯುನಾನಿ ಮತ್ತು ಪ್ರಕೃತಿ ಚಿಕಿತ್ಸೆ) (ಹಾಗೂ ಯೋಗ) ಹುದ್ದೆಗಳಿಗೆ ರೂ.7990/–ರ ಮಾಸಿಕ ಸಂಚಿತ ವೇತನವನ್ನು ನಿಗದಿಪಡಿಸಿ, 11 ತಿಂಗಳ ಅವಧಿಗೆ ಕೆಲವು ಷರತ್ತು ಮತ್ತು ನಿಬಂಧನೆಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶದಲ್ಲಿ, ಆಯುಷ್ ಇಲಾಖೆಯ ಗುತ್ತಿಗೆ ಉಪನ್ಯಾಸಕರ ಸಂಚಿತ ವೇತನವನ್ನು ರೂ. 7990/– ರಿಂದ ರೂ. 13,000/–ಕ್ಕೆ ಹೆಚ್ಚಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ನಿರ್ದೇಶಕರ ಪತ್ರದಲ್ಲಿ, ಪ್ರಾಚಾರ್ಯರು, ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ರವರು ಈ ಹಿಂದೆ ನೇಮಕಗೊಂಡಿದ್ದ ಗುತ್ತಿಗೆ ಉಪನ್ಯಾಸಕರುಗಳ ಅವಧಿಯು ಜನವರಿ–2009ಕ್ಕೆ ಮುಕ್ತಾಯವಾಗುವುದರಿಂದ, ಪುನಃ 11 ತಿಂಗಳ ಅವಧಿಗೆ ಮುಂದುವರೆಸುವಂತೆ ಕೋರಿರುತ್ತಾರೆ. ಅದರಂತೆ, ಕೆಳಕಂಡ ಗುತ್ತಿಗೆ ಉಪನ್ಯಾಸಕರುಗಳ ಗುತ್ತಿಗೆ ಅವಧಿಯನ್ನು ಜನವರಿ–2009ರ ನಂತರ (ಅಂದರೆ, ಅವರ ಗುತ್ತಿಗೆ ಅವಧಿಯು ಮುಗಿದ ದಿನಾಂಕದ ನಂತರ) ಪುನಃ 11 ತಿಂಗಳ ಅವಧಿಗೆ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಭರ್ತಿ ಮಾಡುವವರೆಗೆ ಅಥವಾ ನಿಯಮಾನುಸಾರ ಹುದ್ದೆಗಳನ್ನು ಭರ್ತಿ ಮಾಡುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಅಧಿಸೂಚನೆ ದಿನಾಂಕ 13–3–2007ರ ಅನುಬಂಧದಲ್ಲಿ ನಮೂದಿಸಿರುವ ಷರತ್ತು ಮತ್ತು ನಿಬಂಧನೆಗೊಳಪಟ್ಟು ಮುಂದುವರೆಸುವಂತೆ ಕೋರಿರುತ್ತಾರೆ.

| ಕ್ರ. ಸಂ. | ಹೆಸರು | 11 ತಿಂಗಳು ಗುತ್ತಿಗೆ ಮುಕ್ತಾಯಗೊಂಡ ದಿನಾಂಕ |
|---|---|---|
| **ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು** | | |
| 1 | ಡಾ: ಜ್ಯೋತಿ ಅ. ಮೂಲ ಭಾರತಿ | 28–1–2009 |
| 2 | ಡಾ: ವಿಜಯಕೃಷ್ಣ ವಿ. | 24–1–2009 |
| 3 | ಡಾ: ವಿಜಯಲಕ್ಷ್ಮಿ ಎಂ. ಅಂಗಡಿ | 24–1–2009 |
| 4 | ಡಾ: ಶೋಭಾ ಬಿ. ಮಾಲಿ ಪಾಟೀಲ್ | 27–1–2009 |
| 5 | ಡಾ: ಜ್ಯೋತಿರ್ಮಯಿ ಬಿ. ಜಾನ್ ಬೋ | 27–1–2009 |
| 6 | ಡಾ: ಅನುಸೂಯ | 28–1–2009 |
| 7 | ಡಾ: ಪ್ರತಿಮಾ ಎಸ್. ನಾಗನೂರ | 27–1–2009 |
| 8 | ಡಾ: ಶರಣಪ್ಪ ವೀರಪ್ಪ ಹಕ್ಕಲದಡ್ಡಿ | 22–1–2009 |
| 9 | ಡಾ: ವೀರಭದ್ರಪ್ಪ ಸಿ | 29–1–2009 |
| 10 | ಡಾ: ಮುದಸಿರ್ ಮುಲ್ಲಾ | 29–1–2009 |

ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 394 ಪಿಟಿಡಿ 2008, ಬೆಂಗಳೂರು, ದಿನಾಂಕ: 13ನೇ ಜನವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಇಲ್ಲಿ ಕೆಲಸ ನಿರ್ವಹಿಸುತ್ತಿರುವ ಈ ಕೆಳಕಂಡ ಗುತ್ತಿಗೆ ಉಪನ್ಯಾಸಕರುಗಳು 11 ತಿಂಗಳ ಅವಧಿಯ ಸೇವೆಯನ್ನು ಪೂರ್ಣಗೊಳಿಸಿದ ನಂತರ ಎರಡು ದಿನ ಮೊಟಕುಗೊಳಿಸುವ ಷರತ್ತಿಗೆ ಒಳಪಟ್ಟು (ಹಿಂಬರಹ

ನೀಡುವುದು) ನಂತರ ಅವರುಗಳ ಸೇವೆಯನ್ನು ಮುಂದಿನ ದಿನಾಂಕದಿಂದ ಪುನಃ 11 ತಿಂಗಳ ಅವಧಿಗೆ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಭರ್ತಿ ಮಾಡುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸರ್ಕಾರದ ಆದೇಶ ಸಂಖ್ಯೆ: ಆಕುಕ 23 ಪಿಟಿಡಿ 2007, ದಿನಾಂಕ 13–3–2007ರಲ್ಲಿ ನಮೂದಿಸಿರುವ ಷರತ್ತು ಮತ್ತು ನಿಬಂಧನೆಗೊಳಪಟ್ಟು 2009–10ನೇ ಸಾಲಿನ ಆಯವ್ಯಯದಲ್ಲಿ ಅನುದಾನವನ್ನು ಒದಗಿಸಿಕೊಳ್ಳುವ ಷರತ್ತಿಗೊಳಪಟ್ಟು ಮುಂದುವರೆಸಲಾಗಿದೆ.

| ಕ್ರ. ಸಂ. | ಹೆಸರು | 11 ತಿಂಗಳು ಗುತ್ತಿಗೆ ಮುಕ್ತಾಯಗೊಂಡ ದಿನಾಂಕ |
|---|---|---|
| **ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು** | | |
| 1 | ಡಾ: ಜ್ಯೋತಿ ಅ. ಮೂಲ ಭಾರತಿ | 28–1–2009 |
| 2 | ಡಾ: ವಿಜಯಕೃಷ್ಣ ವಿ. | 24–1–2009 |
| 3 | ಡಾ: ವಿಜಯಲಕ್ಷ್ಮಿ ಎಂ. ಅಂಗಡಿ | 24–1–2009 |
| 4 | ಡಾ: ಶೋಭಾ ಬಿ. ಮಾಲಿ ಪಾಟೀಲ್ | 27–1–2009 |
| 5 | ಡಾ: ಜ್ಯೋತಿರ್ಮಯಿ ಬಿ. ಜಾನ್ ಬೋ | 27–1–2009 |
| 6 | ಡಾ: ಅನುಸೂಯ | 28–1–2009 |
| 7 | ಡಾ: ಪ್ರತಿಮಾ ಎಸ್. ನಾಗನೂರ | 27–1–2009 |
| 8 | ಡಾ: ಶರಣಪ್ಪ ವೀರಪ್ಪ ಹಕ್ಕಲದಡ್ಡಿ | 22–1–2009 |
| 9 | ಡಾ: ವೀರಭದ್ರಪ್ಪ ಸಿ | 29–1–2009 |
| 10 | ಡಾ: ಮುದಸಿರ್ ಮುಲ್ಲಾ | 29–1–2009 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.418

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

**ವಿಷಯ :** ಡಾ: ಎನ್. ಆಶಾರಾಣಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ರಾಂಪುರ, ವಿದ್ಯುತ್ ಕಾಲೋನಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (2) 221/2008–09, ದಿನಾಂಕ 26–12–2008.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರು ಮೇಲೆ ಓದಲಾದ ಪತ್ರದಲ್ಲಿ ಡಾ: ಎನ್. ಆಶಾರಾಣಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ರಾಂಪುರ, ವಿದ್ಯುತ್ ಕಾಲೋನಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ ಇವರು ದಿನಾಂಕ 7–7–2007ರಂದು ಸರ್ಕಾರಿ ಸೇವೆಗೆ ಸೇರಿದ್ದು, ದಿನಾಂಕ 4–8–2008 ರಿಂದ 13–8–2008ರ ವರೆಗೆ ಪರಿವರ್ತಿತ ರಜೆಯನ್ನು ಬಳಸಿಕೊಂಡು ರಜೆ ಮುಗಿದ ನಂತರ ಕರ್ತವ್ಯಕ್ಕೆ ಹಾಜರಾಗದೆ ದಿನಾಂಕ 13–8–2008ರಿಂದ ಅನಧಿಕೃತ ಗೈರುಹಾಜರಾಗಿ, ಇಲಾಖೆಯ ಅನುಮತಿ ಪಡೆಯದೇ ಖಾಸಗಿಯಾಗಿ ಸ್ನಾತಕೋತ್ತರ ವ್ಯಾಸಂಗಕ್ಕೆ ತೆರಳಿರುತ್ತಾರೆ. ಸದರಿ ವೈದ್ಯರು ಖಾಯಂ ಪೂರ್ವ ಸೇವಾ ಅವಧಿಯಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಪ್ರೊಬೇಷನರಿ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 19 ಹೆಚ್ಎಸ್ಹೆಚ್ 2009, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಎನ್. ಆಶಾರಾಣಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ರಾಂಪುರ, ವಿದ್ಯುತ್ ಕಾಲೋನಿ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ, ಇವರು ದಿನಾಂಕ 13–8–2008 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ

ಎಸಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ದಿನಾಂಕ 13–8–2008 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.611

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಗೌರವ ಧನದ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ Law Clerks-cum-Research Assistants ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 29 ಸೇಉನ್ಯಾ 2006, ದಿನಾಂಕ 12–4–2006.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 84 ಸೇಉನ್ಯಾ 2006, ದಿನಾಂಕ 25–1–2007.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 9 ಸೇಉನ್ಯಾ 2008, ದಿನಾಂಕ 5–2–2008.
4. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಅವರ ಪತ್ರ ಸಂಖ್ಯೆ HCE/623/2006, ದಿನಾಂಕ 10–12–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 12–4–2006ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯಕ್ಕೆ ಕಾನೂನು ಪದವೀಧರರನ್ನು ರೂ. 6000–00ಗಳ ಮಾಸಿಕ ಗೌರವ ಧನದ ಆಧಾರದ ಮೇಲೆ Law Clerks-cum-Research Assistantsಗಳಾಗಿ 1 ವರ್ಷದ ಅವಧಿಗೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು. ಆನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ 25–1–2007ರ ಸರ್ಕಾರಿ ಆದೇಶದಲ್ಲಿ ಸದರಿ ಗೌರವ ಧನವನ್ನು ರೂ. 10,000–00ಗಳಿಗೆ ಹೆಚ್ಚಿಸಲಾಗಿತ್ತು. ಸದರಿ ಹುದ್ದೆಯನ್ನು ಮೇಲೆ (3)ರಲ್ಲಿ ಓದಲಾದ ದಿನಾಂಕ 5–2–2008ರ ಸರ್ಕಾರಿ ಆದೇಶದಲ್ಲಿ ದಿನಾಂಕ 1–2–2008ರಿಂದ 1 ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ 10–12–2008ರ ಪತ್ರದಲ್ಲಿ ಸದರಿ ಹುದ್ದೆಗಳನ್ನು ಮುಂದುವರೆಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 2 ಸೇಉನ್ಯಾ 2009, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2009.**

ಕರ್ನಾಟಕ ಉಚ್ಚ ನ್ಯಾಯಾಲಯದ Law Clerks-cum-Research Assistantsಗಳ 41 ಹುದ್ದೆಗಳನ್ನು ದಿನಾಂಕ 1–2–2009 ರಿಂದ 31–1–2010ರವರೆಗೆ ಮುಂದುವರೆಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 120/ವೆಚ್ಚ–8/2009, ದಿನಾಂಕ 29–1–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.612

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ಸೇವೆಗಳು–3)

**ವಿಷಯ :** ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯರಿಗೆ ಉಚಿತ ಬಸ್ ಪ್ರಯಾಣದ ಕೂಪನ್‌ಗಳನ್ನು ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 1242 ಪಿಎಫ್‌ಎಸ್ 87, ದಿನಾಂಕ 3–11–1989.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 52 ಪಿಎಫ್‌ಜಿ 94, ದಿನಾಂಕ 31–10–1995 ಮತ್ತು ದಿನಾಂಕ 7–2–1996.

**ಪ್ರಸ್ತಾವನೆ :**

ಉಲ್ಲೇಖ (1) ಮತ್ತು (2)ರಲ್ಲಿ ಓದಲಾಗಿರುವ ಸರ್ಕಾರದ ಆದೇಶಗಳಲ್ಲಿ ಭಾರತ ದೇಶದ ಸ್ವಾತಂತ್ರ್ಯಕ್ಕಾಗಿ ಸ್ಮರಣೀಯ ಸೇವೆ ಸಲ್ಲಿಸಿದ ಹಾಗೂ ತ್ಯಾಗ ಮಾಡಿದ ಸ್ವಾತಂತ್ರ್ಯ ಸೈನಿಕ ಸಮ್ಮಾನ ಗೌರವಧನ ಪಡೆಯುತ್ತಿರುವ ಸ್ವಾತಂತ್ರ್ಯ ಹೋರಾಟಗಾರರಿಗೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬಸ್ಸುಗಳಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರಯಾಣಿಸಲು ಉಚಿತ ಬಸ್‌ಪಾಸ್ ಸೌಲಭ್ಯವನ್ನು ಕಲ್ಪಿಸಿ ಆದೇಶ ಹೊರಡಿಸಿದೆ.

ಸ್ವಾತಂತ್ರ್ಯ ಹೋರಾಟಗಾರರ ಅನೇಕ ಸಂಘ ಸಂಸ್ಥೆಗಳು/ಸಂಘಟನೆಗಳು ಹಾಗೂ ರಾಜ್ಯದ ಹಲವು ಸ್ವಾತಂತ್ರ್ಯ ಹೋರಾಟಗಾರರು, ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯವರಿಗೆ ಉಚಿತ ಬಸ್‌ಪಾಸ್ ಸೌಲಭ್ಯವನ್ನು ಒದಗಿಸುವಂತೆ ಕೋರಿಕೆಯನ್ನು ಸಲ್ಲಿಸಿರುತ್ತಾರೆ. ಆದ್ದರಿಂದ ಸ್ವಾತಂತ್ರ್ಯ ಹೋರಾಟಗಾರರ ಕೋರಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30 ಪಿಎಫ್‌ಜಿ 2006 (ಭಾಗ), ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2009**

ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯವರಿಗೆ ಕರ್ನಾಟಕ ರಾಜ್ಯ ಸಾರಿಗೆ ಸಂಸ್ಥೆಯ ಬಸ್ಸುಗಳಲ್ಲಿ ಕರ್ನಾಟಕ ರಾಜ್ಯದಲ್ಲಿ ಮಾತ್ರ ಪ್ರಯಾಣಿಸಲು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಪ್ರತಿ ವರ್ಷಕ್ಕೆ ರೂ. 2000/– (ಎರಡು ಸಾವಿರ ರೂಪಾಯಿಗಳು) ಮೌಲ್ಯದ ಉಚಿತ ಬಸ್ ಪ್ರಯಾಣದ ಕೂಪನ್‌ಗಳನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಿಂದ ವಿತರಿಸಲು ಆದೇಶಿಸಿದೆ.

1. ಸಾರಿಗೆ ಸಂಸ್ಥೆಯ ಉಚಿತ ಬಸ್ ಪ್ರಯಾಣದ ಕೂಪನ್‌ಗಳನ್ನು ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯರು ಪ್ರಯಾಣಿಸಿದಾಗ ಮಾತ್ರ ಉಪಯೋಗಿಸುವುದನ್ನು ನಿಗಾವಹಿಸುವುದು ಹಾಗೂ ದುರುಪಯೋಗ ಆಗದಂತೆ ನೋಡಿಕೊಳ್ಳಲು ಅವರ ಗುರ್ತಿನ ಚೀಟಿ ಹಾಗೂ ಅಗತ್ಯ ದಾಖಲೆಗಳನ್ನು ಹಾಜರುಪಡಿಸಲು ಸೂಚನೆ ನೀಡುವುದು.
2. ಈ ಕೂಪನ್‌ಗಳನ್ನು ಪ್ರತಿ ವರ್ಷವು ನವೀಕರಿಸಬೇಕು.
3. ಈ ಕೂಪನ್‌ಗಳನ್ನು ಹೊಂದಿರುವ ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ನಗರ ಸಾರಿಗೆ ಸೌಲಭ್ಯ ಎಲ್ಲೆಲ್ಲಿ ಇದೆಯೋ ಅಲ್ಲಿ ನಗರ ಸಾರಿಗೆ ಬಸ್‌ಗಳಲ್ಲೂ ಪ್ರಯಾಣಿಸಬಹುದು.
4. ಉಚಿತ ಬಸ್ ಪ್ರಯಾಣದ ಕೂಪನ್ ಸೌಲಭ್ಯ ಹೊಂದಿರುವ ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯರು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ವೇಗದೂತ ಹಾಗೂ ಸಾಮಾನ್ಯ ಬಸ್‌ಗಳಲ್ಲಿ ಪ್ರಯಾಣ ಮಾಡಲು ಮಾತ್ರ ಅವಕಾಶ ಕಲ್ಪಿಸಲಾಗಿದೆ. ಸುವಿಹಾರಿ ಮತ್ತು ಅರೆ ಸುವಿಹಾರಿ ಬಸ್‌ಗಳಲ್ಲಿ ಪ್ರಯಾಣಿಸಲು ಅವಕಾಶವಿಲ್ಲ.
5. ಮುಂಗಡವಾಗಿ ಸ್ಥಳ ಕಾಯ್ದಿರಿಸುವ ಸೌಲಭ್ಯವನ್ನು ಶುಲ್ಕವಿಲ್ಲದೆ ನೀಡಬಹುದು.
6. ಉಚಿತ ಬಸ್ ಪ್ರಯಾಣದ ಕೂಪನ್‌ಗಳನ್ನು ಪಡೆಯಲಿಚ್ಛಿಸುವ ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯರು ಈ ಕೆಳಕಂಡ ದಾಖಲೆ/ಮಾಹಿತಿಗಳೊಂದಿಗೆ ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಅರ್ಜಿ ಸಲ್ಲಿಸಬೇಕು.
   ಅ) ಅವರಿಗೆ ಸ್ವಾತಂತ್ರ್ಯ ಸೈನಿಕ ಸನ್ಮಾನ ಕುಟುಂಬ ಗೌರವಧನ ಮಂಜೂರಾದ ಸರ್ಕಾರಿ ಆದೇಶ.
   ಆ) ಕರ್ನಾಟಕ ಮಹಾಲೇಖಪಾಲರು ನೀಡಿರುವ ಗೌರವಧನ ಬಟವಾಡೆ ಆದೇಶ (ಪಿ.ಪಿ.ಓ.)
   ಇ) ಪತ್ರಾಂಕಿತ ಅಧಿಕಾರಿಗಳು ಧೃಢೀಕರಿಸಿದ ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯರ ಇತ್ತೀಚಿನ ನಾಲ್ಕು ಭಾವಚಿತ್ರಗಳು.
   ಈ) ಅರ್ಜಿದಾರರು ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿ ಎಂದು ಧೃಢೀಕರಿಸಿಕೊಳ್ಳಲು ಜಿಲ್ಲಾಧಿಕಾರಿಗಳು ನಿಗಧಿಪಡಿಸುವ ಇನ್ನಿತರ ಮಾಹಿತಿ/ದಾಖಲೆಗಳು.

ಜಿಲ್ಲಾಧಿಕಾರಿಗಳು ಮೇಲ್ಕಂಡ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ ಅವರಿಗೆ ಅವಶ್ಯಕವೆಂದು ಕಂಡುಬಂದಂತಹ ವಿಚಾರಣೆಗಳನ್ನು ಮಾಡಿ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಅಧಿಕಾರಿಗಳು ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯರಿಗೆ ಉಚಿತ ಬಸ್ ಪ್ರಯಾಣದ ಕೂಪನ್‌ಗಳನ್ನು ನೀಡಲು ಶಿಫಾರಸ್ಸು ಮಾಡುವುದು.

ಸ್ವಾತಂತ್ರ್ಯ ಹೋರಾಟಗಾರರ ಪತ್ನಿ/ವಿಧವಾ ಪತ್ನಿಯವರಿಗೆ ಉಚಿತ ಬಸ್ ಪ್ರಯಾಣದ ಕೂಪನ್‌ಗಳನ್ನು ನೀಡಲು ಆಗುವ ವೆಚ್ಚವನ್ನು ಲೆಕ್ಕಶೀರ್ಷಿಕೆ 3055–00–800–0–11 ಸ್ವಾತಂತ್ರ್ಯ ಹೋರಾಟಗಾರರ ವಿಧವಾ ಪತ್ನಿಯವರಿಗೆ ಉಚಿತ ಬಸ್ ಪಾಸ್ ನೀಡುವ ವೆಚ್ಚ (ಹೊಸ ಲೆಕ್ಕ ಶೀರ್ಷಿಕೆ) ಅಡಿಯಲ್ಲಿ ಪೂರಕ ಅಂದಾಜು 2ನೇ ಕಂತಿನಲ್ಲಿ ಒದಗಿಸಿರುವ ರೂ. 1.20 ಕೋಟಿಗಳ ಹೆಚ್ಚುವರಿ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1078 ವೆಚ್ಚ–5/2008, ದಿನಾಂಕ 30–10–2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.613

**ಎಲ್.ಎಸ್. ಚಂದ್ರಶೇಖರರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ರಾಜಕೀಯ ವಿಶ್ರಾಂತಿ ವೇತನ)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾ ಮಂಡಳಿ – ಶ್ರೇಷ್ಠ ವಿಜ್ಞಾನಿಗಳಿಗೆ ಮತ್ತು ಇಂಜಿನಿಯರುಗಳಿಗೆ ರಾಜ್ಯ ಪ್ರಶಸ್ತಿ ಆಯ್ಕೆ ಸಮಿತಿಯ ಪುನರ್ ರಚನೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ವಿಯಇ 67 ವಿತ್ರಮ 2004, ದಿನಾಂಕ 30–5–2005.
2. ಸರ್ಕಾರದ ಆದೇಶ ಸಂಖ್ಯೆ: ವಿಯಇ 166 ವಿತ್ರಮ 2007, ದಿನಾಂಕ 19–12–2007.
3. ಸರ್ಕಾರದ ಆದೇಶ ಸಂಖ್ಯೆ: ವಿಯಇ 114 ವಿತ್ರಮ 2007, ದಿನಾಂಕ 1–8–2007.
4. ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾ ಮಂಡಳಿ ಇವರ ಪತ್ರ ಸಂ: 6.1.11/ ವೈ.ಎಸ್/770, ದಿನಾಂಕ 15–1–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ಮತ್ತು (2) ರಲ್ಲಿನ ಸರ್ಕಾರದ ಆದೇಶದಲ್ಲಿ ಪ್ರೋ. ಸಿ.ಎನ್.ಆರ್. ರಾವ್, ಅಧ್ಯಕ್ಷರು, ಮಾನ್ಯ ಪ್ರಧಾನ ಮಂತ್ರಿಗಳ ವಿಜ್ಞಾನ ಸಲಹಾ ಪರಿಷತ್ತು, ಭಾರತ ಸರ್ಕಾರ, ನ್ಯಾಷನಲ್ ರೀಸರ್ಚ್ ಪ್ರೋಫೆಸರ್ ಮತ್ತು ಗೌ. ಅಧ್ಯಕ್ಷರು, ಜವಹರಲಾಲ್ ನೆಹರು ವಿಜ್ಞಾನ ಸಂಶೋಧನಾ ಕೇಂದ್ರ, ಜಕ್ಕೂರು ಅಂಚೆ, ಬೆಂಗಳೂರು–560064 ರವರನ್ನು ಶ್ರೇಷ್ಠ ವಿಜ್ಞಾನಿಗಳಿಗೆ ಮತ್ತು ಇಂಜಿನಿಯರುಗಳಿಗೆ ರಾಜ್ಯ ಪ್ರಶಸ್ತಿ ಆಯ್ಕೆ ಸಮಿತಿಗೆ ಅಧ್ಯಕ್ಷರನ್ನಾಗಿ ನೇಮಕಾತಿ ಮಾಡಿ ಎಂಟು ಜನ ಸದಸ್ಯರನ್ನೊಳಗೊಂಡಂತೆ ಆಯ್ಕೆ ಸಮಿತಿಯನ್ನು ಪುನರ್ ರಚಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿನ ಸರ್ಕಾರಿ ಆದೇಶದಲ್ಲಿ 2006–07ನೇ ಸಾಲಿನ ಪ್ರಶಸ್ತಿ ಪ್ರಕ್ರಿಯೆಗಳು ಮುಗಿಯುವವರೆಗೂ ಈ ಸಮಿತಿಯು ಅಸ್ತಿತ್ವದಲ್ಲಿರುತ್ತದೆ ಎಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (4)ರಲ್ಲಿನ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾ ಮಂಡಳಿಯ ಕಾರ್ಯದರ್ಶಿ ಇವರ ಪತ್ರದಲ್ಲಿ 2008ನೇ ಸಾಲಿನ ಪ್ರಶಸ್ತಿ ಆಯ್ಕೆ ಸಮಿತಿಯನ್ನು ಪುನರ್ ರಚಿಸುವಂತೆ ಕೋರಿರುತ್ತಾರೆ.

ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾ ಮಂಡಳಿ ಇವರ ಕೋರಿಕೆಯಂತೆ ಶ್ರೇಷ್ಠ ವಿಜ್ಞಾನಿಗಳಿಗೆ ಮತ್ತು ಇಂಜಿನಿಯರುಗಳಿಗೆ ರಾಜ್ಯ ಪ್ರಶಸ್ತಿ ಆಯ್ಕೆ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ ಪರಿಶೀಲಿಸಿದ ಸರ್ಕಾರವು ಪ್ರೋ. ಸಿ.ಎನ್.ಆರ್. ರಾವ್, ಅಧ್ಯಕ್ಷರು, ಮಾನ್ಯ ಪ್ರಧಾನ ಮಂತ್ರಿಗಳ ವಿಜ್ಞಾನ ಸಲಹಾ ಪರಿಷತ್ತು, ಭಾರತ ಸರ್ಕಾರ, ನ್ಯಾಷನಲ್ ರೀಸರ್ಚ್ ಪ್ರೋಫೆಸರ್ ಮತ್ತು ಗೌ. ಅಧ್ಯಕ್ಷರು, ಜವಹರಲಾಲ್ ನೆಹರು ವಿಜ್ಞಾನ ಸಂಶೋಧನಾ ಕೇಂದ್ರ, ಜಕ್ಕೂರು ಅಂಚೆ, ಬೆಂಗಳೂರು ಇವರನ್ನು ಮೊದಲಿಗೆ ಎಂಟು ಜನ ಸದಸ್ಯರನ್ನೊಳಗೊಂಡ ಶ್ರೇಷ್ಠ ವಿಜ್ಞಾನಿಗಳಿಗೆ ಮತ್ತು ಇಂಜಿನಿಯರುಗಳಿಗೆ ರಾಜ್ಯ ಪ್ರಶಸ್ತಿ ಆಯ್ಕೆ ಸಮಿತಿಗೆ ಅಧ್ಯಕ್ಷರನ್ನಾಗಿ ನೇಮಿಸಿ ನಂತರ ಅವರ ಆಯ್ಕೆಯ ನಿರ್ಣಯದಂತೆ ಮಾಡಲ್ಪಡುವ ಸದಸ್ಯರನ್ನು ಈ ಸಮಿತಿಗೆ ಅಳವಡಿಸಿ ಸರ್ಕಾರದಿಂದ ನೇಮಕಾತಿಯನ್ನು ಆದೇಶಿಸಲಾಗುವುದು.

**ಸರ್ಕಾರದ ಆದೇಶ ಸಂಖ್ಯೆ: ವಿಯಇ 09 ವಿತ್ರಮ 2009, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಪ್ರೋ. ಸಿ.ಎನ್.ಆರ್. ರಾವ್, ಅಧ್ಯಕ್ಷರು, ಮಾನ್ಯ ಪ್ರಧಾನ ಮಂತ್ರಿಗಳ ವಿಜ್ಞಾನ ಸಲಹಾ ಪರಿಷತ್ತು, ಭಾರತ ಸರ್ಕಾರ, ನ್ಯಾಷನಲ್ ರೀಸರ್ಚ್ ಪ್ರೋಫೆಸರ್ ಮತ್ತು ಗೌ. ಅಧ್ಯಕ್ಷರು, ಜವಹರಲಾಲ್ ನೆಹರು ವಿಜ್ಞಾನ ಸಂಶೋಧನಾ ಕೇಂದ್ರ, ಜಕ್ಕೂರು ಅಂಚೆ, ಬೆಂಗಳೂರು ಇವರನ್ನು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅನುದಾನಿತ ಸಂಸ್ಥೆಯಾದ ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾ ಮಂಡಳಿಯ ಮುಖಾಂತರ ನಡೆಸಲಾಗುವ ಶ್ರೇಷ್ಠ ವಿಜ್ಞಾನಿಗಳಿಗೆ ಮತ್ತು ಇಂಜಿನಿಯರುಗಳಿಗೆ ರಾಜ್ಯ ಪ್ರಶಸ್ತಿ ಆಯ್ಕೆ ಸಮಿತಿಯ ಅಧ್ಯಕ್ಷರನ್ನಾಗಿ ತಕ್ಷಣದಿಂದ ಅನ್ವಯವಾಗುವಂತೆ ಹಾಗೂ ಮುಂದಿನ ಆದೇಶದವರೆಗೂ ನೇಮಿಸಲಾಗಿದೆ.

ಈ ಸಮಿತಿಯ ಸದಸ್ಯರುಗಳ ನೇಮಕಾತಿಯ ಅಧ್ಯಕ್ಷರ ಆಯ್ಕೆ ನಿರ್ಣಯಕ್ಕೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.770

**ಕೆ. ಬೋರಲಿಂಗಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ನರೆಗಲ್ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂ: ವಇ/42/ಹೆಚ್ಎಂ/1999, ದಿನಾಂಕ 10–5–2000.

ಪ್ರಸ್ತಾವನೆ :

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಆದೇಶದನ್ವಯ, ವಿಧಾನಸಭಾ ಕ್ಷೇತ್ರವಾರು ಪುನರ್ರಚಿಸಲು ತೀರ್ಮಾನಿಸಿದ್ದು, ಅದರಂತೆ ನರೆಗಲ್ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 63 ಹೆಚ್ಎಎಸ್ 2009, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ನರೆಗಲ್ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ರಚಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಲಕ್ಷ್ಮಣರಾವ್ ಗಣೇಶಭಟ್, ಗ್ರಾಮ ಪುರೋಹಿತ ಸಾ॥ ನರೆಗಲ್, ರೋಣ ತಾ॥ | ಸಾಮಾನ್ಯ |
| 2 | ಶ್ರೀ ಕಲ್ಲಪ್ಪ ಮಲ್ಲಪ್ಪ ಕಿಟಗೇರಿ, ಸಾ॥ ನರೆಗಲ್, ರೋಣ ತಾ॥ | ಪರಿಶಿಷ್ಟ ಜಾತಿ |
| 3 | ಶ್ರೀ ಮಾಬುಸಾಬ ರೈಮಾನಸಾಬ ಹೊಸಮನಿ ಸಾ॥ ನರೆಗಲ್, ರೋಣ ತಾ॥ | ಅಲ್ಪಸಂಖ್ಯಾತರು |
| 4 | ಶ್ರೀಮತಿ ಲಲಿತಾ ಮಹಾದೇವಪ್ಪ ಛಲವಾದಿ ಸಾ॥ ನರೆಗಲ್, ರೋಣ ತಾ॥ | ಪರಿಶಿಷ್ಟ ಜಾತಿ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.772

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ಕಂದಾಯ ತಾಲ್ಲೂಕಿಗೆ ಶ್ರೀ ಸಾಲಿಮಠ್ ಗಂಗಾಧರ್ ಇವರನ್ನು ನೋಟರಿಯಾಗಿ ನೇಮಕ ಮಾಡುವ ಕುರಿತು – (ಶ್ರೀ ಸೈಯದ್ ಮೊಯಿದ್ದೀನ್ ಚಿಸ್ತಿ ಇವರ ನಿಧನದಿಂದ ತೆರವಾದ)

**ಓದಲಾಗಿದೆ:**
1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರ ಪತ್ರ ಸಂಖ್ಯೆ ಡಿಜಿಎಂ/ಎಡಿಎಂಎನ್/1000/2009, ದಿನಾಂಕ 5–6–2008.
2. ಸರ್ಕಾರಿ ಪತ್ರ ಸಂಖ್ಯೆ ಲಾ 78 ಎಲ್ಸಿಎಲ್ 08, ದಿನಾಂಕ 30–6–2008.
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರ ಪತ್ರ ಸಂಖ್ಯೆ: ಡಿಸಿಜಿ/ಎಡಿಎಂಎನ್/97/2009, ದಿನಾಂಕ 6–1–2009.

ಪ್ರಸ್ತಾವನೆ :

ಮೇಲೆ (1)ರಲ್ಲಿ ಓದಲಾದ ದಿನಾಂಕ 5–6–2008ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರು ಶ್ರೀ ಸೈಯದ್ ಮೊಯಿನುದ್ದೀನ್ ಚಿಸ್ತಿ ನೋಟರಿ, ಚಿತ್ತಾಪುರ ಇವರು ದಿನಾಂಕ 9–12–2007ರಂದು ನಿಧನರಾಗಿರುವುದಾಗಿ ಧೃಢೀಕರಣ ಮರಣ ಪ್ರಮಾಣ ಪತ್ರದೊಂದಿಗೆ ವರದಿ ಮಾಡಿದ್ದರು.

ಅದರಂತೆ, ಮೇಲೆ (2)ರಲ್ಲಿ ಓದಲಾದ ದಿನಾಂಕ 30–6–2008ರ ಸರ್ಕಾರದ ಪತ್ರದಲ್ಲಿ ಸದರಿ ನೋಟರಿಯ ಬದಲಿ ನೇಮಕಾತಿಗೆ ನೋಟರಿಗಳ ಅಧಿನಿಯಮ/ನಿಯಮಗಳನ್ವಯ ಪ್ರಸ್ತಾವನೆ ಸಲ್ಲಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಜಿಲ್ಲೆ, ಇವರನ್ನು ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ 6–1–2009ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಜಿಲ್ಲೆ ಇವರು 09 ಅರ್ಜಿದಾರರ ಮನವಿಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 78 ಎಲ್ಸಿಎಲ್ 2008, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2009**

ನೋಟರಿ ಅಧಿನಿಯಮ (1952) ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ಶ್ರೀ ಸಾಲಿಮಠ್ ಗಂಗಾಧರ್, ಬಿನ್ ವೀರಭದ್ರಯ್ಯ, ವಕೀಲರು, ಕೇರಾಫ್, ನಾಗಮ್ಮ ಸಾಲಿಮಠ್, ಮನೆ ನಂ. 5–1–37, ಹೊಲಿಕಟ್ಟೆ ರಸ್ತೆ, ಚಿತ್ತಾಪುರ–585211, ಗುಲ್ಬರ್ಗಾ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಚಿತ್ತಾಪುರ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು, ನಿಯಮಾನುಸಾರ ನಿಗಧಿಪಡಿಸಲಾದ ರೂ. 1000/– (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಲೆಕ್ಕಶೀರ್ಷಿಕೆ 0070–ಇತರೆ–ಆಡಳಿತಾತ್ಮಕ–ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06–ಇತರೆ ಬಾಬ್ತುಗಳಿಗೆ (0070–01–501–0–06) ಜಮಾ ಮಾಡಿ, ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ವೃತ್ತಿ ಪ್ರಮಾಣ ಪತ್ರವನ್ನು ನೀಡಲಾಗುವುದು. ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ 1952ರನ್ವಯ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು. ಈ ಸಂಬಂಧದ ವೆಚ್ಚವನ್ನು ವಕೀಲರೆ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.774

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ–2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಿಷಯ :** ಶ್ರೀ ಮುದ್ದುಮಲ್ಲಯ್ಯ, ಸಿವಿಲ್ ಜಡ್ಜ್ (ಕಿರಿಯ ವಿಭಾಗ, ಅಮಾನತ್ತು ಆದೇಶದಲ್ಲಿ) ಇವರಿಗೆ ಕಡ್ಡಾಯ ನಿವೃತ್ತಿ ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 106 ಎಲ್ಐಸಿ 97, ದಿನಾಂಕ 18–2–98.

2. ಪತ್ರ ಸಂಖ್ಯೆ: D.1.1/04, (HVC 105/04) ದಿನಾಂಕ 3–2–2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. 1ರ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ಮುದ್ದುಮಲ್ಲಯ್ಯ ಇವರನ್ನು, ಸಿವಿಲ್ ಜಡ್ಜ್ (ಕಿ.ವಿ.) ಹುದ್ದೆಗೆ ನೇಮಕಮಾಡಲಾಗಿರುತ್ತದೆ. ಸದರಿ ಅಧಿಕಾರಿಯು ಸಿವಿಲ್ ಜಡ್ಜ್ (ಕಿ.ವಿ.) ಮತ್ತು ಜೆಎಂಎಫ್‌ಸಿ, ಬಸವಕಲ್ಯಾಣ ಹುದ್ದೆಯಲ್ಲಿ ಕಾರ್ಯನಿರ್ವಹಿಸಿರುವ ಅವಧಿಯಲ್ಲಿ ಅಂದರೆ ದಿನಾಂಕ 23–4–2004ರಂದು ಬೀದರ್ ಜಿಲ್ಲೆಯ ಬಸವಕಲ್ಯಾಣದ ವಕೀಲರುಗಳ ಸಂಘದಿಂದ ಸದರಿ ಅಧಿಕಾರಿಯ ವಿರುದ್ಧ ಮಾಡಲಾದ, ಭ್ರಷ್ಟಾಚಾರ, ಅನುಚಿತ ಕಾರ್ಯವೈಖರಿ, ಅಕ್ರಮಗಳು ಇತ್ಯಾದಿ ಆರೋಪಗಳ ಬಗ್ಗೆ ಜಿಲ್ಲಾ ನ್ಯಾಯಾಧೀಶರ ವರದಿ ಪಡೆಯಲಾಗಿದೆ. ಅಲ್ಲದೆ ಶಿಸ್ತು ವಿಚಾರಣೆ ಸಂಖ್ಯೆ: 1/04ರಲ್ಲಿ ವಿಚಾರಣಾಧಿಕಾರಿಯಿಂದ ಆರೋಪಗಳ ಬಗ್ಗೆ ತನಿಖೆ ನಡೆಸಿ ವರದಿ ಪಡೆಯಲಾಗಿದೆ. ಅಧಿಕಾರಿಯನ್ನು ಅಮಾನತ್ತಿನಲ್ಲಿ ಇಡಲಾಗಿರುತ್ತದೆ. ಆರೋಪಗಳ ತೀವ್ರತೆ ಹಾಗೂ ಸಾಬೀತಾಗಿರುವ ಹಿನ್ನೆಲೆಯಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯವು ಅಧಿಕಾರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(vi)ರ ಮೇರೆಗೆ ಕಡ್ಡಾಯ ನಿವೃತ್ತಿಗೊಳಿಸಬೇಕೆಂದು ನಿರ್ಣಯಿಸಿರುತ್ತದೆ. ಅದರಂತೆ, ಮೇಲೆ ಓದಲಾದ ಕ್ರ.ಸಂ. 2ರ ಪತ್ರದಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್, ಬೆಂಗಳೂರು ಅವರು ಶ್ರೀ ಮುದ್ದುಮಲ್ಲಯ್ಯ ಸಿವಿಲ್ ಜಡ್ಜ್ (ಕಿ.ವಿ.) ಇವರ ವಿರುದ್ಧ ನಡೆಸಲಾದ ವಿಚಾರಣಾ ವರದಿಯನ್ನು ಲಗತ್ತಿಸುತ್ತಾ ಸದರಿ ನ್ಯಾಯಿಕ ಅಧಿಕಾರಿಗೆ ಕಡ್ಡಾಯ ನಿವೃತ್ತಿ ದಂಡನೆಯನ್ನು ವಿಧಿಸುವ ತೀರ್ಮಾನವನ್ನು ಜಾರಿಗೊಳಿಸುವ ಸರ್ಕಾರದ ಅದೇಶ ಹೊರಡಿಸುವಂತೆ ಪ್ರಸ್ತಾವನೆ ಕಳುಹಿಸಿದ್ದಾರೆ. ಭಾರತ ಸಂವಿಧಾನದ ಅನುಚ್ಛೇದ 234ರನ್ವಯ ಘನತೆವೆತ್ತ ರಾಜ್ಯಪಾಲರು ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಹುದ್ದೆಯ ನೇಮಕಾತಿ ಪ್ರಾಧಿಕಾರವಾಗುವುದರಿಂದ ಪ್ರಸ್ತಾವನೆಗೆ ಅವರ ಸಹಮತಿ ಪಡೆಯಲಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 21 ಎಲ್ಐಸಿ 2009, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಮುದ್ದುಮಲ್ಲಯ್ಯ, ಸಿವಿಲ್ ಜಡ್ಜ್ (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಬಸವಕಲ್ಯಾಣ (ಅಮಾನತ್ತಿನಲ್ಲಿ) ಇವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8(vi)ರ ಮೇರೆಗೆ ನ್ಯಾಯಿಕ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿ ಸರ್ಕಾರವು ಆದೇಶಿಸಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.775

**ಇ. ಶಿವಾನಂದ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಭೂಮಾಪನ ಇಲಾಖೆಯಲ್ಲಿನ ಪರಿವೀಕ್ಷಣಾ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾ.ನಿ) ಇವರಿಗೆ ಖಾಯಂ ಪೂರ್ವಾವಧಿ ಘೋಷಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಭೂಮಾಪನ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬ್ಬಂದಿ(ಜಿ) ಖಾಪೂ.45/ 08–09, ದಿನಾಂಕ 27–9–2008, 29–11–2008 ಮತ್ತು 29–1–2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 27–9–2008ರ ಪತ್ರದಲ್ಲಿ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ನೇಮಕಗೊಂಡಿರುವ ಈ ಕೆಳಕಂಡ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾ.ನಿ) ರವರುಗಳ ಖಾಯಂ ಪೂರ್ವಾವಧಿ ಮುಕ್ತಾಯಗೊಂಡಿರುವುದಾಗಿ ವರದಿ ಮಾಡಿರುತ್ತಾರೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಸರ್ಕಾರಿ ಸೇವೆಗೆ ಹಾಜರಾದ ದಿನಾಂಕ | ಖಾಯಂ ಪೂರ್ವಾವಧಿ ಪೂರ್ಣಗೊಳ್ಳುವ ದಿನಾಂಕ | ಇಲಾಖಾ ಪರೀಕ್ಷೆ ಪಾಸು ಮಾಡಿದ ಬಗ್ಗೆ ಮಾಹಿತಿ |
|---|---|---|---|---|
| 1 | ಪಿ.ಎಸ್. ಕುಸುಮಲತ | 1–2–2006 | 31–1–2008 | ಪಾಸು ಮಾಡಿರುತ್ತಾರೆ |
| 2 | ಬಿ.ಜಿ. ಉಮೇಶ್ | 17–4–2006 | 16–4–2008 | ಪಾಸು ಮಾಡಿರುತ್ತಾರೆ |
| 3 | ಆರ್. ನಿರಂಜನ್ | 17–4–2006 | 16–4–2008 | ಪಾಸು ಮಾಡಿರುತ್ತಾರೆ |
| 4 | ಎಂ.ಎಸ್. ಕೃಷ್ಣಪ್ರಸಾದ್ | 17–4–2006 | 16–4–2008 | ಪಾಸು ಮಾಡಿರುವುದಿಲ್ಲ |
| 5 | ಎಂ.ಎಸ್. ಕೇಶವಮೂರ್ತಿ | 17–4–2006 | 16–4–2008 | ಪಾಸು ಮಾಡಿರುತ್ತಾರೆ |
| 6 | ಎಂ. ರವಿಕುಮಾರ್ | 26–4–2006 | 25–4–2008 | ಪಾಸು ಮಾಡಿರುತ್ತಾರೆ |
| 7 | ಬಿ. ರಾಮಾಂಜನೇಯ | 19–4–2006 | 18–4–2008 | ಪಾಸು ಮಾಡಿರುತ್ತಾರೆ |
| 8 | ಡಾ: ಬಿ. ರಾಜಣ್ಣ | 17–4–2006 | 16–4–2008 | ಪಾಸು ಮಾಡಿರುತ್ತಾರೆ |
| 9 | ಕೆ. ರಮ್ಯ | 23–6–2006 | 22–6–2008 | ಪಾಸು ಮಾಡಿರುತ್ತಾರೆ |

ಮೇಲ್ಕಂಡ ಅಧಿಕಾರಿಗಳ ಪೈಕಿ ಕ್ರಮ ಸಂಖ್ಯೆ: 4ರಲ್ಲಿ ತೋರಿಸಲಾದ ಶ್ರೀ ಎಂ.ಎಸ್. ಕೃಷ್ಣಪ್ರಸಾದ್ ಇವರನ್ನು ಬಿಟ್ಟು ಉಳಿದ ಎಲ್ಲಾ ಅಧಿಕಾರಿಗಳು ಎಲ್ಲಾ ಪರೀಕ್ಷೆಗಳನ್ನು ನಿಗದಿತ ಅವಧಿಯೊಳಗೆ ಪಾಸು ಮಾಡಿರುವುದರಿಂದ ಅವರುಗಳ ಹೆಸರಿನ ಮುಂದೆ ತೋರಿಸಲಾದ ದಿನಾಂಕದಿಂದ ಎರಡು ವರ್ಷಗಳ ಖಾಯಂ ಪೂರ್ವಾವಧಿಯನ್ನು ಕರ್ನಾಟಕ ಸರ್ಕಾರಿ ಸೇವಾ (ಖಾಯಂ ಪೂರ್ವಾವಧಿ) ನಿಯಮಗಳು 1977ರ ನಿಯಮ 5(1)(ಎ)ರನ್ವಯ ತೃಪ್ತಿಕರವಾಗಿ ಪೂರ್ಣಗೊಳಿಸಿರುತ್ತಾರೆಂದು ಸರ್ಕಾರದ ಆದೇಶ ನೀಡಲು ಕೋರಿರುತ್ತಾರೆ ಹಾಗೂ ಶ್ರೀ ಎಂ.ಎನ್. ಕೃಷ್ಣಪ್ರಸಾದ್, ಇವರ ಖಾಯಂ ಪೂರ್ವಾವಧಿಯನ್ನು ಕರ್ನಾಟಕ ಸರ್ಕಾರಿ ಸೇವಾ (ಖಾಯಂ ಪೂರ್ವಾವಧಿ) ನಿಯಮಾವಳಿಗಳ ನಿಯಮ 4(i)(ii)ರ ಮೇರೆಗೆ ದಿನಾಂಕ 17–4–2008 ರಿಂದ ಒಂದು ವರ್ಷ ವಿಸ್ತರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಮುಂದುವರೆದು, ಆಯುಕ್ತರು, ಭೂಮಾಪನ ಇಲಾಖೆ ರವರು ಮೇಲೆ ಹೇಳಲಾದ ದಿನಾಂಕ 29–11–2008ರ ಪತ್ರದಲ್ಲಿ ಶ್ರೀ ಬಿ. ರಾಮಾಂಜನೇಯ, ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ತಂಡ–2 ರವರು ತಮ್ಮ ಕೆಲಸ ಕಾರ್ಯಗಳಲ್ಲಿ ಬೇಜವಾಬ್ದಾರಿತನದಿಂದ ನಿರ್ವಹಿಸುತ್ತಿರುವುದಾಗಿ, ವಿಚಾರಣಾಧಿಕಾರಿಗಳು, ನಗರಮಾಪನ ತಂಡ–1 ರವರು ತಿಳಿಸಿದ್ದಾರೆ. ಆದ್ದರಿಂದ ಶ್ರೀ ಬಿ. ರಾಮಾಂಜನೇಯ ಇವರ ಖಾಯಂ ಪೂರ್ವಾವಧಿಯನ್ನು ದಿನಾಂಕ 19–4–2008ರಿಂದ ಒಂದು ವರ್ಷದ ಅವಧಿಗೆ ವಿಸ್ತರಿಸುವಂತೆ/ತಾತ್ಕಾಲಿಕವಾಗಿ ತಡೆಹಿಡಿಯುವಂತೆ ಕೋರಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಬಿ. ರಾಮಾಂಜನೇಯ ರವರು ದಿನಾಂಕ 19–4–2006ರಂದು ಕೆಲಸಕ್ಕೆ ಸೇರಿದ್ದು ಅವರು ದಿನಾಂಕ 18–4–2008ರವರೆಗೆ ಯಾವುದೇ ಆಕ್ಷೇಪಣೆ ಇಲ್ಲದೆ ಕಾರ್ಯ ನಿರ್ವಹಿಸಿರುವುದನ್ನು ಪರಿಗಣಿಸಿ ಪ್ರಸ್ತಾಪಿತ 9 ಪ್ರೋಬೇಷನರಿ ಭೂದಾಖಲೆಗಳ ಸಹಾಯಕ ನಿರ್ದೇಶಕರ ಪೈಕಿ ಇಲಾಖಾ ಪರೀಕ್ಷೆ ಪಾಸು ಮಾಡದೇ ಇರುವ ಶ್ರೀ ಎಂ.ಎಸ್. ಕೃಷ್ಣಪ್ರಸಾದ್ ರವರೊಬ್ಬರ ಬಗ್ಗೆ ದಿನಾಂಕ 17–4–2008ರಿಂದ ಒಂದು ವರ್ಷ ಖಾಯಂ ಪೂರ್ವಾವಧಿ ವಿಸ್ತರಿಸಿ, ಉಳಿದ 8 ಜನರ ಖಾಯಂ ಪೂರ್ವಾವಧಿ ಘೋಷಿಸುವುದು ಸೂಕ್ತ ಎಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 114 ಭೂದಾಸೇ(3) 2008, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಪರಿವೀಕ್ಷಣಾ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾ.ನಿ)ಗಳನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)(ಎ)ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಪಿ.ಎಸ್. ಕುಸುಮಲತ | 1–2–2006 | 31–1–2008 |
| 2 | ಬಿ.ಜಿ. ಉಮೇಶ್ | 17–4–2006 | 16–4–2008 |
| 3 | ಆರ್. ನಿರಂಜನ್ | 17–4–2006 | 16–4–2008 |
| 4 | ಎಂ.ಎಸ್. ಕೇಶವಮೂರ್ತಿ | 17–4–2006 | 16–4–2008 |
| 5 | ಎಂ. ರವಿಕುಮಾರ್ | 26–4–2006 | 25–4–2008 |
| 6 | ಬಿ. ರಾಮಾಂಜನೇಯ | 19–4–2006 | 18–4–2008 |
| 7 | ಡಾ: ಬಿ. ರಾಜಣ್ಣ | 17–4–2006 | 16–4–2008 |
| 8 | ಕೆ. ರಮ್ಯ | 23–6–2006 | 22–6–2008 |

ಶ್ರೀ ಎಂ.ಎಸ್. ಕೃಷ್ಣಪ್ರಸಾದ್, ಪರಿವೀಕ್ಷಣಾ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾ.ನಿ.) ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 4(i)(ii)ರ ಮೇರೆಗೆ ದಿನಾಂಕ 17–4–2008 ರಿಂದ ಮುಂದಿನ ಒಂದು ವರ್ಷದವರೆಗೆ ವಿಸ್ತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.813

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದರ ಉಪಾಧ್ಯಕ್ಷರ ಆಪ್ತ ಶಾಖೆಗೆ ಮಂಜೂರಾದ ಹುದ್ದೆಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 68 ಶಿಸನೇ 2008, ದಿನಾಂಕ 5–8–2008 ಮತ್ತು 11–8–2008
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 68 ಶಿಸನೇ 2008, ದಿನಾಂಕ 24–11–2008.
3. ಉಪಾಧ್ಯಕ್ಷರು, ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇವರ ಕಡತ ಸಂಖ್ಯೆ: ಅಭಾಸಕ/ಉ/1/08, ದಿನಾಂಕ 29–12–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 5–8–2008ರ ಆದೇಶದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಬೆಂಗಳೂರು ಇದನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ. ದಿನಾಂಕ 11–8–2008ರ ಆದೇಶದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇದರ ಉಪಾಧ್ಯಕ್ಷರಿಗೆ ಸಂಪುಟ ದರ್ಜೆ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಆದೇಶದಲ್ಲಿ ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಈ ಸಮಿತಿಯ ಉಪಾಧ್ಯಕ್ಷರ ಆಪ್ತ ಶಾಖೆಗೆ ಹಾಗೂ ಸಮಿತಿ ಶಾಖೆಗೆ ಒಟ್ಟು 13 ವಿವಿಧ ಹುದ್ದೆಗಳನ್ನು ಮಂಜೂರು ಮಾಡಿ ಈ ಹುದ್ದೆಗಳನ್ನು ನಿಯೋಜನೆ/ಹೊರಗುತ್ತಿಗೆ ಮೂಲಕ ಭರ್ತಿ ಮಾಡಲು ತಿಳಿಸಲಾಗಿದೆ.

ಉಪಾಧ್ಯಕ್ಷರು, ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ, ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಕಡತದಲ್ಲಿ ಹೊಸದಾಗಿ ಸ್ಥಾಪಿಸಲಾದ ಅನಿವಾಸಿ ಭಾರತೀಯರ ಸಮಿತಿಯ ಉಪಾಧ್ಯಕ್ಷರ ಕಛೇರಿಗೆ ಹಾಗೂ ಸಮಿತಿಯ ಕಛೇರಿಗೆ ಸಿ.ಆ.ಸು. ಇಲಾಖೆಯಲ್ಲಿ ಸಿಬ್ಬಂದಿ ಕೊರತೆ ಇರುವ ಕಾರಣ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿದೆ. ಸಚಿವರ ಆಪ್ತ ಶಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಆಪ್ತ ಸಿಬ್ಬಂದಿಯನ್ನು ನೇಮಕ ಮಾಡಲು ಅವಕಾಶ ಕಲ್ಪಿಸಲಾಗಿದ್ದು, ಅದರಂತೆ ಅನಿವಾಸಿ ಭಾರತೀಯರ ಸಮಿತಿಯ ಉಪಾಧ್ಯಕ್ಷರ ಆಪ್ತ ಶಾಖೆಗೆ ಸಿಬ್ಬಂದಿಯನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲು ದಿನಾಂಕ 24–11–2008ರ ಆದೇಶದಲ್ಲಿ ಮಂಜೂರಾಗಿರುವ ಹುದ್ದೆಗಳನ್ನು ನಿಯೋಜನೆ/ಗುತ್ತಿಗೆ ಆಧಾರದ ಮೇಲೆ ತುಂಬಲು ಅನುಮತಿ ನೀಡುವಂತೆ ಕೋರಿರುವುದನ್ನು ಪರಿಶೀಲಿಸಲಾಗಿದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಗಣಿಸಿ ದಿನಾಂಕ 11–8–2008ರ ಸಿ.ಆ.ಸು.ಇ. 68 ಶಿಸನೇ 2008ರ ಆದೇಶದಲ್ಲಿ ಅನಿವಾಸಿ ಭಾರತೀಯರ ಸಮಿತಿ ಕರ್ನಾಟಕ ಇದರ ಉಪಾಧ್ಯಕ್ಷರಿಗೆ ಸಂಪುಟ ದರ್ಜೆ ಸ್ಥಾನಮಾನವನ್ನು ನೀಡಲಾಗಿರುವ ಹಿನ್ನೆಲೆಯಲ್ಲಿ ಸದರಿ ಸಮಿತಿಯ ಉಪಾಧ್ಯಕ್ಷರ ಆಪ್ತ ಶಾಖೆಯಲ್ಲಿ ಮಂಜೂರಾದ ಹುದ್ದೆಗಳಲ್ಲಿ ಮಾತ್ರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಅನುಮತಿ ನೀಡುವುದು ಸೂಕ್ತವೆಂದು ಸರ್ಕಾರವು ನಿರ್ಧರಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 68 ಶಿಸನೇ 2008, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ "ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ" ಇದರ ಉಪಾಧ್ಯಕ್ಷರ ಆಪ್ತ ಶಾಖೆಯಲ್ಲಿ ಸರ್ಕಾರಿ ಆದೇಶ 24–11–2008ರ ಸಿಆಸುಇ 68 ಶಿಸನೇ 2008ರಲ್ಲಿ ಸದರಿ ಸಮಿತಿಯ ಉಪಾಧ್ಯಕ್ಷರ ಆಪ್ತ ಶಾಖೆಯಲ್ಲಿ ಮಂಜೂರಾದ ಹುದ್ದೆಗಳಲ್ಲಿ ಮಾತ್ರ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸರ್ಕಾರದ ಅನುಮತಿಯನ್ನು ನೀಡಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 147–ವೆಚ್ಚ 12/09, ದಿನಾಂಕ 20–2–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.815

**ಎಸ್. ತಿಪ್ಪೇಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ರಾಜ್ಯ ಶಿಷ್ಟಾಚಾರ)

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ನ್ಯಾಯಾಂಗ ಅಧಿಕಾರಿಗಳಿಗೆ 'Robe Allowance' ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರಿ ಆದೇಶ ಸಂಖ್ಯೆ ಲಾ 124 ಎಲ್‌ಎಸಿ 1997, ದಿನಾಂಕ 17–11–2004.

2. ಶ್ರೀ ಕೆ.ಎಸ್. ಪುಂಡಲೀಕ (24–9–2008), ಶ್ರೀ ಎಸ್.ಎಲ್. ಪಾಟೀಲ್ (19–12–2008), ಶ್ರೀ ಆರ್.ಎಸ್. ಪಾಟೀಲ್ (22–4–2008) ಹಾಗೂ ಶ್ರೀ ಜಗದೀಶ್ ಎಸ್. ಚಿಕ್ಕಣ್ಣನವರ್ (11–2–2008) ಅವರುಗಳ ಮನವಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ನ್ಯಾಯಾಂಗ ಇಲಾಖೆಗೆ ಸೇರಿದ ಅಧಿಕಾರಿಗಳಿಗೆ (ಜ್ಯುಡಿಷಿಯಲ್ ಆಫೀಸರ್ಸ್) ಐದು (5) ವರ್ಷಗಳಿಗೊಮ್ಮೆ ರೂ. 5,000.00 ರಂತೆ 'Robe Allowance' ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಕರ್ನಾಟಕ ಸರ್ಕಾರಿ ಸಚಿವಾಲಯದ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯಲ್ಲಿ ನ್ಯಾಯಾಂಗ ಸೇವೆಯಿಂದ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ಮನವಿಗಳನ್ನು ಸಲ್ಲಿಸಿ, ಸರ್ವೋಚ್ಚ ನ್ಯಾಯಾಲಯವು ದಿನಾಂಕ 5–2–2008ರಂದು ನೀಡಿದ ಆದೇಶದಂತೆ ನಿಯೋಜನೆ ಮೇಲಿರುವ ತಮಗೂ ಸಹ 5 ವರ್ಷಕ್ಕೊಮ್ಮೆ ರೋಬ್ ಅಲೋಯೆನ್ಸ್ ಮಂಜೂರು ಮಾಡುವಂತೆ ಕೋರಿದ್ದಾರೆ. ಅಧಿಕಾರಿಗಳ ಕೋರಿಕೆಯನ್ನು ಸರ್ವೋಚ್ಚ ನ್ಯಾಯಾಲಯದ ಆದೇಶದೊಂದಿಗೆ ಪರಿಶೀಲಿಸಲಾಗಿದೆ. ಅಖಿಲ ಭಾರತ ನ್ಯಾಯಾಧೀಶರ ಸಂಘವು ಸಲ್ಲಿಸಿದ ರಿಟ್ ಅರ್ಜಿ (ಸಿ) ಸಂಖ್ಯೆ 1022/1989ರಲ್ಲಿ ಸಲ್ಲಿಸಲಾದ ವಾದಕಾಲೀನ ಅರ್ಜಿ ಸಂಖ್ಯೆ 213ರಲ್ಲಿ ಸರ್ವೋಚ್ಚ ನ್ಯಾಯಾಲಯವು ದಿನಾಂಕ 5–2–2008ರಂದು ಈ ಕೆಳಕಂಡಂತೆ ಆದೇಶ ನೀಡಿದೆ:

> This application is filed by six officers working in the cadre of District Judges in the Kerala State Higher Judicial Service. It is contended that Judicial Officers while on deputation as Law Secretary, Registrar General Registrars, Additional Registrar are denied the benefit of Shetty Commission recommendations, merely because they are working on deputation. The stand taken by the State Government is not correct. The Officers continue to be judicial officers even though they are on deputation. The State Government is, therefore, directed to pass appropriate orders within a period eight weeks extending the benefits to those judicial officers who are working on deputation.
>
> I.A. is disposed of accordingly.

ಸರ್ವೋಚ್ಚ ನ್ಯಾಯಾಲಯದ ಮೇಲಿನ ಆದೇಶದನ್ವಯ ನ್ಯಾಯಾಂಗ ಸೇವೆಯ ಅಧಿಕಾರಿಗಳು ನಿಯೋಜನೆ ಮೇಲೆ ಬೇರೆಡೆ ಕಾರ್ಯ ನಿರ್ವಹಿಸುವಾಗಲೂ ಸಹ ನ್ಯಾಯಾಂಗ ಅಧಿಕಾರಿಗಳಾಗಿಯೇ ಮುಂದುವರಿಯುತ್ತಾರೆ. ಇದನ್ನು ಪರಿಗಣಿಸಿದ ಸರ್ಕಾರವು ನ್ಯಾಯಾಂಗ ಸೇವೆಯಿಂದ ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ನಿಯೋಜನೆ ಮೇರೆಗೆ ಕಾರ್ಯ ನಿರ್ವಹಿಸುತ್ತಿರುವ ಉಲ್ಲೇಖಿತ ಅಧಿಕಾರಿಗಳ ಮನವಿಯನ್ನು ಪರಿಗಣಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 154 ಸಅಸೇ 2008, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ವೋಚ್ಚ ನ್ಯಾಯಾಲಯವು ದಿನಾಂಕ 5-2-2008ರಂದು ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ನ್ಯಾಯಾಧೀಶರುಗಳಿಗೆ ಐದು ವರ್ಷಗಳಿಗೊಮ್ಮೆ ನೀಡಬೇಕಾದ ರೂ. 5,000/–ರಂತೆ (ರೂಪಾಯಿ ಐದು ಸಾವಿರಗಳು ಮಾತ್ರ) 'Robe Allowance'ನ್ನು ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು ಸಚಿವಾಲಯಕ್ಕೆ ಸಂಬಂಧಿಸಿದ "Salary Head Other Allowances" ನಿಂದ ಭರಿಸತಕ್ಕದ್ದು.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 573 ವೆಚ್ಚ–5/2008, ದಿನಾಂಕ 11–6–2008ರ ಅನ್ವಯ ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಿದ ನಂತರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.843

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ಸೇವೆಗಳು–3)

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ವೇತನ ಶ್ರೇಣಿ ರಹಿತ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ವಿಮಾನ ನಿಲ್ದಾಣ ರೈಲ್ವೆ ಸಂಪರ್ಕದ ಮೂಲಭೂತ ಸೌಲಭ್ಯಗಳನ್ನು ಸೃಜಿಸುವ ಅವಶ್ಯಕತೆಯಿದ್ದು, ಈ ಸಂಬಂಧವಾಗಿ ರಾಜ್ಯ ಸರ್ಕಾರದ ಇಲಾಖೆಗಳು ಹಾಗೂ ರೈಲ್ವೆ ಸಚಿವಾಲಯದೊಂದಿಗೆ ಸಂಪರ್ಕ ಸಾಧಿಸಲು ರೈಲ್ವೆ ಇಲಾಖೆಯ ಹಿರಿಯ ಅಧಿಕಾರಿಯ ಅವಶ್ಯಕತೆ ಇರುವುದರಿಂದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ವೇತನ ಶ್ರೇಣಿ ರಹಿತ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಅಗತ್ಯತೆಯನ್ನು ಮನಗಂಡ ಸರ್ಕಾರವು ಅದರಂತೆ ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 874 ಸಅಸೇ 2008, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2009**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ವೇತನ ಶ್ರೇಣಿ ರಹಿತ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ 15–1–2009ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೃಜಿಸಲಾಗಿದೆ.

2. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 81 ವೆಚ್ಚ–12, 2009, ದಿನಾಂಕ 9–2–2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.844

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸು ಇಲಾಖೆ (ಸೇವೆಗಳು–3)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀ ಇ.ಇ. ಗಂಗರಾಜಯ್ಯ, ವಲಯ ಅರಣ್ಯಾಧಿಕಾರಿ ಇವರು ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಪತ್ರ ಸಂಖ್ಯೆ: ಬಿ1/ರಜೆ/ವಿವ–109/06–07, ದಿನಾಂಕ 20–12–2007 ಹಾಗೂ 17–7–2008.

**ಪ್ರಸ್ತಾವನೆ :**

ಶ್ರೀ ಇ.ಇ. ಗಂಗರಾಜಯ್ಯ, ವಲಯ ಅರಣ್ಯಾಧಿಕಾರಿ ಇವರ ಸೇವೆಯನ್ನು ಜಲಾನಯನ ಅಭಿವೃದ್ಧಿ ಇಲಾಖೆ ದಿನಾಂಕ 8–6–2005 ರಂದು ಹಿಂತಿರುಗಿಸಿದೆ. ಆ ಇಲಾಖೆಯಿಂದ ದಿನಾಂಕ 8–6–2005ರಂದು ಬಿಡುಗಡೆಗೊಂಡು ಬದಲಿ ನೇಮಕಾತಿ ಕೋರಿ ದಿನಾಂಕ 9–6–2005 ರಂದು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯಲ್ಲಿ ವರದಿ ಮಾಡಿಕೊಂಡಿರುತ್ತಾರೆ. ನಂತರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಕಛೇರಿ ಆದೇಶ ಸಂಖ್ಯೆ: 81/05–06, ದಿನಾಂಕ 18–6–2005ರಲ್ಲಿ ಇವರನ್ನು ಕಾರ್ಯ ಯೋಜನೆ, ಶಿವಮೊಗ್ಗ ಹುದ್ದೆಗೆ ನೇಮಿಸಿದ್ದು ಅನಾರೋಗ್ಯದ ಕಾರಣ ಸದರಿ ಹುದ್ದೆಯಲ್ಲಿ ವರದಿ ಮಾಡಿಕೊಂಡಿರುವುದಿಲ್ಲ.

ನಂತರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರ ಆದೇಶ ಸಂಖ್ಯೆ 90/2005-06, ದಿನಾಂಕ 30-6-2005ರಲ್ಲಿ ಇವರನ್ನು ದೇವನಹಳ್ಳಿ ವಲಯಕ್ಕೆ ಶ್ರೀ ಎ.ಸಿ. ನಾಗರಾಜ್, ಇವರ ಸ್ಥಳಕ್ಕೆ ವರ್ಗಾಯಿಸಲಾಗಿದೆ. ಅದರಂತೆ ದಿನಾಂಕ 2-7-2005 ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ ಇವರ ಕಛೇರಿಯಲ್ಲಿ ಕಾರ್ಯ ವರದಿ ಮಾಡಿಕೊಂಡಿರುತ್ತಾರೆ. ಈ ವರ್ಗಾವಣೆ ಆದೇಶ ವಿರುದ್ದ ಶ್ರೀ ಎ.ಸಿ. ನಾಗರಾಜ್ ವಲಯ ಅರಣ್ಯಾಧಿಕಾರಿ ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 5056/05ನ್ನು ಸಲ್ಲಿಸಿದ್ದು, ನ್ಯಾಯಮಂಡಳಿ ದಿನಾಂಕ 7-7-2005 ರಂದು ಈ ವರ್ಗಾವಣೆ ಆದೇಶಕ್ಕೆ ತಡೆಯಾಜ್ಞೆ ನೀಡಿ, ವೃಂದ ನಿರ್ವಾಹಣಾ ಪ್ರಾಧಿಕಾರಕ್ಕೆ ಮನವಿ ಸಲ್ಲಿಸಲು ಸೂಚಿಸಿದೆ.

ವೃಂದ ನಿರ್ವಾಹಣಾ ಪ್ರಾಧಿಕಾರದ ದಿನಾಂಕ 18-7-2005ರ ತೀರ್ಮಾನದಂತೆ ಅಧಿಕೃತ ಜ್ಞಾಪನಾ ಸಂಖ್ಯೆ: ಟಿ1:ಆರ್‌ಎಫ್‌ಓ:ಟಿಆರ್‌ಎಸ್:ಸಿಆರ್-:2005-06, ದಿನಾಂಕ 21-7-2005ರಲ್ಲಿ ಶ್ರೀ ಇ.ಇ. ಗಂಗರಾಜಯ್ಯ ಇವರನ್ನು ದೇವನಹಳ್ಳಿ ವಲಯದಲ್ಲಿ ಹಾಗೂ ಶ್ರೀ ಎ.ಸಿ. ನಾಗರಾಜ್, ಇವರನ್ನು ವೃಕ್ಷ ಘಟಕ, ಶ್ರೀಮಂಗಲ ಇಲ್ಲಿಗೆ ವರ್ಗಾಯಿಸಿ ಆದೇಶ ಹೊರಡಿಸಿದೆ.

ಈ ಆದೇಶವನ್ನು ಮನಃ ಶ್ರೀ ಎ.ಸಿ. ನಾಗರಾಜ್, ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯು ಅರ್ಜಿ ಸಂಖ್ಯೆ 5836/05ರಲ್ಲಿ ಪ್ರಶ್ನಿಸಿದ ಕಾರಣ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ದಿನಾಂಕ 20-1-2006ರ ಆದೇಶದಲ್ಲಿ ಶ್ರೀ ಎ.ಸಿ. ನಾಗರಾಜ್, ವಲಯ ಅರಣ್ಯಾಧಿಕಾರಿ ಇವರನ್ನು ದೇವನಹಳ್ಳಿ ವಲಯದಲ್ಲಿ ಮುಂದುವರಿಸಲು ಹಾಗೂ ಶ್ರೀ ಇ.ಇ. ಗಂಗರಾಜಯ್ಯ, ವಲಯ ಅರಣ್ಯಾಧಿಕಾರಿ ಇವರನ್ನು ಬೆಂಗಳೂರು ಸಮೀಪ ಖಾಲಿ ಇರುವ ಹುದ್ದೆಗೆ ನೇಮಿಸಲು ಸೂಚಿಸಿದೆ. ಅದರಂತೆ ಆದೇಶ ಸಂಖ್ಯೆ 173/05-06 ದಿನಾಂಕ 4-3-2006ರಲ್ಲಿ ಶ್ರೀ ಇ.ಇ. ಗಂಗರಾಜಯ್ಯ, ವಲಯ ಅರಣ್ಯಾಧಿಕಾರಿ ಇವರನ್ನು ಬನಶಂಕರಿ ಘಟಕಕ್ಕೆ ವರ್ಗಾವಣೆ ಮಾಡಿದ್ದು, ಅನಾರೋಗ್ಯದ ಕಾರಣ ಸದರಿ ಅಧಿಕಾರಿಯು, ಈ ಹುದ್ದೆಗೆ ಹಾಜರಾಗಿರುವುದಿಲ್ಲ. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳ ಆದೇಶ ಸಂಖ್ಯೆ 3/2006-07, ದಿನಾಂಕ 5-4-2006ರಲ್ಲಿ ಇವರನ್ನು ಹೊಸಕೋಟೆ ವಲಯಕ್ಕೆ ವರ್ಗಾವಣೆ ಮಾಡಿದ್ದು, ಅದರಂತೆ ಶ್ರೀ ಗಂಗರಾಜಯ್ಯ, ವಲಯ ಅರಣ್ಯಾಧಿಕಾರಿ ಇವರು ದಿನಾಂಕ 6-4-2006ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗದ ಕಛೇರಿಯಲ್ಲಿ ಕಾರ್ಯವರದಿ ಮಾಡಿಕೊಂಡಿರುತ್ತಾರೆ.

ಅಧಿಕಾರಿಯು ಅನಾರೋಗ್ಯದ ನಿಮಿತ್ತ ದಿನಾಂಕ 19-6-2005 ರಿಂದ 1-7-2005 ರವರೆಗೆ ಉಪಯೋಗಿಸಿರುವ ರಜೆಯನ್ನು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ದಿನಾಂಕ 20-12-2007ರ ಅಧಿಕೃತ ಜ್ಞಾಪನಾ ಸಂಖ್ಯೆ: ಬಿ1/ರಜೆ/ವಿವ-109/2006-07ರಲ್ಲಿ ಮಂಜೂರು ಮಾಡಿರುತ್ತಾರೆ. ಆದುದರಿಂದ ಶ್ರೀ ಇ.ಇ. ಗಂಗರಾಜಯ್ಯ ವಲಯ ಅರಣ್ಯಾಧಿಕಾರಿ ಇವರು ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಕಡ್ಡಾಯ ನಿರೀಕ್ಷಣಾ ಅವಧಿಯೆಂದು ಹಾಗೂ ಪರಿವರ್ತಿತ ರಜೆಯನ್ನು ಮಂಜೂರು ಮಾಡುವಂತೆ ಮೇಲೆ ಓದಲಾದ ಪತ್ರಗಳಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 94 ಅಅಸೇ 2008, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಇ.ಇ. ಗಂಗರಾಜಯ್ಯ, ವಲಯ ಅರಣ್ಯಾಧಿಕಾರಿ ಇವರು ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಕೆಳಕಂಡಂತೆ ಪರಿಗಣಿಸಿ ಆದೇಶಿಸಿದೆ.

| | | |
|---|---|---|
| 1. | ದಿನಾಂಕ 9-6-2005 ರಿಂದ ದಿನಾಂಕ 18-6-2005 ರವರೆಗೆ ಮತ್ತು ದಿನಾಂಕ 2-7-2005 ರಿಂದ ದಿನಾಂಕ 4-3-2006 ರವರೆಗೆ | ಕ.ನಾ.ಸೇ.ನಿ. 8(15)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿ |
| 2 | ದಿನಾಂಕ 5-3-2006 ರಿಂದ ದಿನಾಂಕ 5-4-2006 ರವರೆಗೆ | ಪರಿವರ್ತಿತ ರಜೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.845

**ಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ (ಸೇವೆಗಳು)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2008-09ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ರಾಜ್ಯದ 3 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್-20015:28:2007-ಡಿಆರ್‌ಡಿಎ (ಎಸ್‌ಆರ್ ನಂ. 10) ದಿನಾಂಕ 3-4-08, (ಎಸ್‌ಆರ್ ನಂ. 40) ದಿನಾಂಕ 28-5-08.
2. ಸರ್ಕಾರದ ಆದೇಶ ಸಂ: ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ 23-5-2008, 26-6-2008.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್-17014/10/2008-09, ಡಿಆರ್‌ಡಿಎ (ಎಸ್‌ಎಲ್ 82) ದಿನಾಂಕ 3-11-08 ಮತ್ತು (ಎಸ್ ನಂ. 90) ದಿನಾಂಕ 14-11-2008, (ಎಸ್‌ಎಲ್ ನಂ. 108) ದಿನಾಂಕ 11-12-08, (ಎಸ್‌ಎಲ್ ನಂ. 141) ದಿನಾಂಕ 9-1-09 ಮತ್ತು (ಎಸ್‌ಎಲ್ ನಂ. 159) ದಿನಾಂಕ 23-1-09.
4. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ 18-12-2008, 31-1-2009 ಮತ್ತು 19-2-2009.
5. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್-17014/10/2008-09, ಡಿಆರ್‌ಡಿಎ (ಎಸ್ ನಂ. 186) ದಿನಾಂಕ 19-2-09.

**ಪ್ರಸ್ತಾವನೆ :**

2008-09ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಕೇಂದ್ರ ಸರ್ಕಾರ ಓದಲಾಗಿದೆ (1)ರ ಪತ್ರಗಳ ದಿನಾಂಕ 3-4-2008 ಹಾಗೂ 28-5-2008ರಲ್ಲಿ ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಒಂದನೇ ಕಂತಿನ ಅನುದಾನವಾಗಿ ರೂ. 5,38,77,000 ಗಳನ್ನು ಬಿಡುಗಡೆ ಮಾಡಿವೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ಓದಲಾಗಿದೆ (2)ರ ಆದೇಶಗಳ ಸಮಸಂಖ್ಯೆ ದಿನಾಂಕ 23-5-2008 ಮತ್ತು 26-6-2008ರಲ್ಲಿ ರೂ. 1,79,57,000ಗಳನ್ನು ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರ ಓದಲಾಗಿದೆ (3)ರ ಪತ್ರಗಳಲ್ಲಿ ರಾಜ್ಯದ 21 ಜಿಲ್ಲಾ ಪಂಚಾಯತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ರೂ. 4,44,60,000ಗಳನ್ನು ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರ ಓದಲಾಗಿದೆ (4)ರ ಆದೇಶಗಳಲ್ಲಿ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನದ ಆಧಾರದ ಮೇಲೆ ರೂ. 1,47,52,000ಗಳನ್ನು ಬಿಡುಗಡೆ ಮಾಡಿದೆ.

ಓದಲಾಗಿದೆ (5)ರನ್ವಯ ಕೇಂದ್ರ ಸರ್ಕಾರದ ಡಿಆರ್‌ಡಿಎ ಆಡಳಿತ ಯೋಜನೆಯಡಿ ಎರಡನೇ ಕಂತಿನ ಅನುದಾನವಾಗಿ ಬೆಂಗಳೂರು ಗ್ರಾಮಾಂತರ, ಬಳ್ಳಾರಿ ಮತ್ತು ಚಿಕ್ಕಮಗಳೂರು ಜಿಲ್ಲೆಗಳಿಗೆ ರೂ. 51,81,000ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 17,27,000ಗಳನ್ನು ಸದರಿ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2009**

2008-09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಡಿಆರ್‌ಡಿಎ ಆಡಳಿತ ಯೋಜನೆಯಡಿ ಬಿಡುಗಡೆ ಮಾಡಿರುವ ಎರಡನೇ ಕಂತಿನ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 17,27,000ನ್ನು (ಹದಿನೇಳು ಲಕ್ಷದ ಇಪ್ಪತ್ತೇಳು ಸಾವಿರ ರೂಪಾಯಿಗಳು ಮಾತ್ರ) ಕೆಳಕಾಣಿಸಿದ ಮೂರು ಜಿಲ್ಲಾ ಪಂಚಾಯತಿಗಳಿಗೆ ಷರತ್ತುಗಳಿಗೆ ಒಳಪಟ್ಟು ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಜಿಲ್ಲಾ ಪಂಚಾಯತಿ | ಜಿ.ಪಂ. ಕೋಡ್ | ಡಿ.ಡಿ.ಓ ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ (ರೂಗಳಲ್ಲಿ) | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ (ರೂಗಳಲ್ಲಿ) |
|---|---|---|---|---|---|
| 1 | ಬೆಂಗಳೂರು (ಗ್ರಾ) | 402 | 0300zz8001 | 0 | 0 |
| 2 | ಬಳ್ಳಾರಿ | 418 | 3400zz0001 | 32,01,000 | 10,67,000 |
| 3 | ಚಿಕ್ಕಮಗಳೂರು | 408 | 1800zz0017 | 19,80,000 | 6,60,000 |
| | | | ಒಟ್ಟು | **51,81,000** | 17,27,000 |

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ (ಡಿಆರ್‌ಡಿಎ ಆಡಳಿತ ಕೋಶದ) ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ಯಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2008–2009 (2515–00–196–6–06)"ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಎಫ್‌ಡಿ 1 ಜೆಡ್‌ಪಿಎ 2007 (ಪಿ2) ದಿನಾಂಕ 26–4–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ 1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬಿಡುಗಡೆ ಮಾಡಿರುವ ಅನುದಾನವನ್ನು ಖಜಾನೆಯಿಂದ ಸೆಳೆಯುವ ಅಧಿಕಾರವನ್ನು ಆಯಾಯ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗೆ ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯತಿ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಜಿಲ್ಲಾ ಪಂಚಾಯತಿಗಳ, ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನೆ ವರದಿಗಳನ್ನು, ನಿರ್ದೇಶಕರು (ಸ್ವಉಕಾ) ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ: ಗ್ರಾಅಪ 85 ಪಿಬಿಎಸ್ 2009, ದಿನಾಂಕ 5–3–2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.846

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು, (ಸ್ವ.ಉ.ಕಾ) ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಕಇ 54 ಬಿಸಿಎ 2009, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2009**

ರಾಜ್ಯದ ಅಲೆಮಾರಿ ಜನಾಂಗದವರಿಗೆ ಸೌಲಭ್ಯ ಹಾಗೂ ಮೀಸಲಾತಿ ಕಲ್ಪಿಸುವಲ್ಲಿ ನೇಮಕ ಮಾಡಲಾದ ರಾಜ್ಯ ಮತ್ತು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಸಲಹಾ ಸಮಿತಿ ಸಿಬ್ಬಂದಿ ನೇಮಕ ಮಾಡಲಾಗಿರುವ ಸರ್ಕಾರದ ಆದೇಶ ಸಂಖ್ಯೆ: ಸಕಇ 97 ಬಿಸಿಎ 2007, ದಿನಾಂಕ 2–6–07ರಲ್ಲಿನ ಕೊನೆಯ ಸಾಲಿನಲ್ಲಿರುವ ಲೆಕ್ಕ ಶೀರ್ಷಿಕೆ "2225–03–001–0–71" ಎಂಬುದನ್ನು "2225–03–001–0–01 NP" ಎಂಬುದಾಗಿ ತಿದ್ದಿ ಓದಿಕೊಳ್ಳುವುದು. ಉಳಿದಂತೆ ಆದೇಶದಲ್ಲಿ ಇತರೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.837

**ಕೆ. ಸುಬ್ಬಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–II, ಸಮಾಜ ಕಲ್ಯಾಣ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಡಿವೈ.ಎಸ್.ಪಿ., ಬಸವನಬಾಗೇವಾಡಿ ಪೊಲೀಸ್ ಠಾಣೆ, ವಿಜಾಪುರ ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ/ಐಎನ್‌ವಿ(ಜಿ)ಎಲ್: 43:ಸಿಆರ್–8/2007–08, ದಿನಾಂಕ 29–8–2008.

ಪ್ರಸ್ತಾವನೆ :

ಶ್ರೀ ಭೀಮಪ್ಪ ಯಮನಪ್ಪ ಬೆಳ್ಳುಬ್ಬಿ, ಡಿವೈ.ಎಸ್.ಪಿ. ಬಸವನಬಾಗೇವಾಡಿ ಪೊಲೀಸ್ ಠಾಣೆ, ವಿಜಾಪುರ ಇವರ ವಿರುದ್ಧ ಗುನ್ನೆ ಸಂಖ್ಯೆ: 8/07ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ವಿಜಾಪುರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ 29–8–2008ರೊಡನೆ ಕಳುಹಿಸುತ್ತಾ ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ, 1988ರ 19(1)(ಸಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ಸಂಖ್ಯೆ: ಲೋಕ್: ಐಎನ್‌ವಿ(ಜಿ):ಎಲ್:43:ಸಿಆರ್–8/2007–08, ದಿನಾಂಕ 29–8–2008 ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಶ್ರೀ ಮಹದೇವಪ್ಪ ಕೆಂಚಪ್ಪ ಹರೇ ಕುರುಬರ ಸಾ: ಕಣಗಾಲ, ಬಸವನಬಾಗೇವಾಡಿ.
2. ಪ್ರಥಮ ವರ್ತಮಾನ ವರದಿ, ಬಸವನಬಾಗೇವಾಡಿ, ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣದ ಸಂಖ್ಯೆ: 8/07
3. ಪ್ರಾಯೋಗಿಕ ಪಂಚನಾಮೆ ದಿನಾಂಕ 25–10–2007.
4. ಟ್ರ್ಯಾಪ್‌ನ ಮಹಜರ್ ದಿನಾಂಕ 25–10–2007.
5. ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: 6(ಸಿ) ದಿನಾಂಕ 26–11–2007.
6. ಕೃತ್ಯ ನಡೆದ ಸ್ಥಳದ ನಕಾಶೆ
7. ಸಾಕ್ಷಿಗಳ ಹೇಳಿಕೆಗಳು:
    1. ಮಹಾದೇವಪ್ಪ ಕೆಂಚಪ್ಪ ಹಿರೇಕುರುಬರ ಸಾ: ಕಣಕಾಲ (ಫಿರ್ಯಾದಿ)
    2. ರಮೇಶ ಚಿದಾನಂದ ನಳಬಂದ ಪ್ರ.ದ.ಸ. (ಪಂಚ ನಂ.1)
    3. ಬಾಲಾಜಿ ಶ್ರೀನಿವಾಸ ಕುಲಕರ್ಣಿ, ಪ್ರ.ದ.ಸ. (ಪಂಚ ನಂ.2)
    4. ಎಮ್.ಸಿ. ನಾಯಕ, ದ್ವಿ.ದ.ಸ. ತಾಲ್ಲೂಕ್ ಪಂಚಾಯತ್ ಬಿಜಾಪುರ.
    5. ಕಾಂತು @ ಕಾಂತಪ್ಪ ಸಿದ್ರಾಮಪ್ಪ ಹೊಸಮನಿ ಸಾ: ಉತ್ನಾಳ
    6. ಸಿದ್ಧವ್ವ ಗಂ. ಸುಬ್ಬಣ್ಣಾ ವಾಲೀಕಾರ ಸಾ: ಕಣಕಾಲ
    7. ಸಂಗಪ್ಪ ಮುದಕಪ್ಪ ಹಾಲಿಹಾಳ ಸಾ: ಕಣಕಾಲ
    8. ಶಾಂತವ್ವ ಸಿದ್ಧಪ್ಪ ವಾಲೀಕಾರಿ ಸಾ; ಕಣಕಾಲ
    9. ಭೀಮಾಬಾಯಿ ಗಂ. ಸಂಗಪ್ಪ ಹಾಲಿಹಾಳ ಸಾ: ಕಣಕಾಲ
    10. ಸಿದ್ಧಪ್ಪ ಸುಬ್ಬಣ್ಣಾ ವಾಲೀಕಾರ ಸಾ: ಕಣಕಾಲ
    11. ಹಣಮಂತ ಸುಬ್ಬಣ್ಣಾ ವಾಲೀಕಾರ ಸಾ: ಕಣಕಾಲ
    12. ಮಲ್ಲಪ್ಪ ಮುದಕಪ್ಪ ಹಾಲಿಹಾಳ ಸಾ: ಕಣಕಾಲ
    13. ಕರಿಯಪ್ಪ ಸಿದ್ಧಪ್ಪ ವಾಲೀಕಾರ ಸಾ: ಕಣಕಾಲ
    14. ಡಿ. ಸಂತೋಷಕುಮಾರ, ಪಿ.ಎಸ್.ಐ., ಬಸವನಬಾಗೇವಾಡಿ
    15. ಕಾಡಯ್ಯ ಚಿದಾನಂದಯ್ಯ ಸ್ಥಾವರಮಠ, ಸಿ.ಎಸ್.ಸಿ., ಡಿ.ಎಸ್.ಪಿ. ಆಫೀಸ್ ಬಸವನಬಾಗೇವಾಡಿ
    16. ಭೀಮಣ್ಣ ಬಸವಲಿಂಗಪ್ಪ ಚಿಗರಿ, ಸಿ.ಪಿ.ಸಿ. ಬಸವನಬಾಗೇವಾಡಿ ಪೊಲೀಸ್ ಠಾಣೆ
    17. ಶೋಭಾ ಯಮನಪ್ಪ ಹರಿಜನ, ಡಬ್ಲ್ಯುಪಿಸಿ, ಬಸವನಬಾಗೇವಾಡಿ ಪೊಲೀಸ್ ಠಾಣೆ
    18. ಡಿ.ಆರ್. ಪಾಟೀಲ, ಎ.ಇ. ಲೋಕೋಪಯೋಗಿ ಇಲಾಖೆ, ಬಸವನಬಾಗೇವಾಡಿ
    19. ಎಚ್.ಎಸ್. ಸೋಲಾಪುರ, ಸಿ.ಎಚ್.ಸಿ., ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ
    20. ಬಿ.ಎಂ. ಅಮಕುಲಿ, ಸಿ.ಎಚ್.ಸಿ., ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ
    21. ಐ.ಎಂ. ದುಂಡಸಿ, ಸಿಪಿಸಿ, ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ
    22. ಜಿ.ಎ. ಹಡಪದ, ಸಿಪಿಸಿ, ವಿಜಾಪುರ
    23. ಎಸ್.ಎಮ್. ಅಕಳವಾಡಿ, ಎ.ಪಿ.ಸಿ., ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ.

8. ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ಸಂಖ್ಯೆ: 27 ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 152/07.

ತನಿಖಾಧಿಕಾರಿಗಳಾದ ಶ್ರೀ ಎಸ್.ಎಫ್. ಕಮ್ಮಾರ, ಡಿವೈ.ಎಸ್.ಪಿ. ಕರ್ನಾಟಕ ಲೋಕಾಯುಕ್ತ, ಬಾಗಲಕೋಟೆ ಇವರು ಶ್ರೀ ಬಿ.ವೈ. ಬೆಳ್ಳುಬ್ಬಿ, ಡಿವೈ.ಎಸ್.ಪಿ. ರವರ ವಿರುದ್ಧ ದಂಡಾರ್ಹ ಪ್ರಕರಣವನ್ನು 8/07, ಕರ್ನಾಟಕ ಲೋಕಾಯುಕ್ತ, ಬಸವನಬಾಗೇವಾಡಿ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 8/07ರಲ್ಲಿ ಲಂಚ ನಿರೋಧಕ ಕಾಯಿದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಬಿ.ವೈ. ಬೆಳ್ಳುಬ್ಬಿ, ಡಿವೈ.ಎಸ್.ಪಿ. ರವರು ಫಿರ್ಯಾದಿಯಾದ ಶ್ರೀ ಮಹದೇವಪ್ಪ ಕೆಂಚಪ್ಪ ಹಿರೇ ಕುರುಬರ ಕಣಕಾಲ, ಬಸವನಬಾಗೇವಾಡಿ ಇವರ ಸಂಬಂಧಿಕರ ಮೇಲೆ ಕೊಟ್ಟಿದ್ದ ಪ್ರಕರಣದಲ್ಲಿ ಇಬ್ಬರು ಹೆಣ್ಣು ಮಕ್ಕಳ ಹೆಸರನ್ನು ಕೇಸಿನಿಂದ ತೆಗೆಯಿಸುವ ಕೆಲಸವನ್ನು ಮಾಡಲು ರೂ. 20,000/–ಗಳ ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸಾರ್ವಜನಿಕ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 25–10–2007ರಂದು ಬಸವನಬಾಗೇವಾಡಿ ಪೊಲೀಸ್ ಠಾಣೆ, ಡಿವೈ.ಎಸ್.ಪಿ. ಕಾರ್ಯಾಲಯದಲ್ಲಿ ಬೀಸಿದ ಟ್ರ್ಯಾಪ್ ಪ್ರಕರಣ ಯಶಸ್ವಿಯಾಗಿ ಶ್ರೀ ಬಿ.ವೈ. ಬೆಳ್ಳುಬ್ಬಿ, ಡಿವೈ.ಎಸ್.ಪಿ., ಅಕ್ರಮ ಸಂಭಾವನೆಯಾದ 20,000/– ರೂ.ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಫ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ಧೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ. ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 20,000/–ಗಳನ್ನು ಶ್ರೀ ಬಿ.ವೈ. ಬೆಳ್ಳುಬ್ಬಿ ರವರಿಂದ ಬಸವನಬಾಗೇವಾಡಿ ಪೊಲೀಸ್ ಠಾಣೆ, ಡಿವೈ.ಎಸ್.ಪಿ., ಕಾರ್ಯ ಸ್ಥಳದಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ತನಿಖಾ ಕಾಲದಲ್ಲಿ ಸಂಗ್ರಹಿಸಲಾದ ದಾಖಲೆಗಳನ್ನು ಹಾಗೂ ಸಾಕ್ಷಿದಾರರ ಹೇಳಿಕೆಗಳನ್ನು ಗಮನಿಸಿ ಆರೋಪಿತ ಅಧಿಕಾರಿಗಳ ವಿರುದ್ಧ ಮಾಡಲಾಗಿರುವ ಆರೋಪಗಳು ಮೇಲ್ನೋಟಕ್ಕೆ ಸಾಬೀತಾಗುವ ಬಗ್ಗೆ ಪೂರಕ ಅಂಶಗಳಿರುವುದರಿಂದ ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ, 1988ರ ಕಲಂ 7, 13(ಸಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಲಂಚ ನಿರೋಧಕ ಕಾಯಿದೆ 1988ರ ಕಲಂ 19ರನ್ವಯ ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ಬಿ.ವೈ. ಬೆಳ್ಳುಬ್ಬಿ, ಡಿವೈ.ಎಸ್.ಪಿ, ರವರನ್ನು ಕಲಂ 7 ಮತ್ತು 13(ಸಿ) ಜೊತೆಗೆ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು, ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 410 ಪೊಸಿಪ 2007, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2009**

ಭ್ರಷ್ಟಾಚಾರ ನಿರ್ಮೂಲನಾ ಕಾಯಿದೆ 1988ರ ಕಲಂ 19(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ವೈ. ಬೆಳ್ಳುಬ್ಬಿ, ಡಿವೈ.ಎಸ್.ಪಿ., ಬಸವನಬಾಗೇವಾಡಿ, ಬಿಜಾಪುರ ಇವರನ್ನು ಸದರಿ ಕಾಯಿದೆ ಕಲಂ 7, 13(1)(ಸಿ) ಜೊತೆಯಲ್ಲಿ ಓದಲಾದ ಕಲಂ 13(2) ರನ್ವಯ ಮೇಲೆ ಹೇಳಿದ ಆರೋಪಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿಯನ್ನು ನೀಡುತ್ತದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು, 1977ರ ನಿಯಮ 19ರನ್ವಯ ಸರ್ಕಾರದ ಪರವಾಗಿ ಹೊರಡಿಸಲಾಗುವ ಆದೇಶಕ್ಕೆ ಸಹಿ ಮಾಡಲು ಈ ಕೆಳಕಂಡ ಪ್ರಾಧಿಕಾರಿಯು ಅಧಿಕಾರ ಹೊಂದಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.738

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಆರ್. ನಾರಾಯಣಪ್ಪ, ನಿವೃತ್ತ ಡಿವೈ.ಎಸ್.ಪಿ. (ಎಫ್.ಪಿ.ಬಿ) ರವರ ಹಿಂದಿನ ಸೇವೆಯನ್ನು ನಿವೃತ್ತಿ ವೇತನಕ್ಕಾಗಿ ಪರಿಗಣಿಸುವ ಬಗ್ಗೆ.

**ಓದಲಾಗಿದೆ:** ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ4:83:08–09, ದಿನಾಂಕ 15–9–2008.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಆರ್. ನಾರಾಯಣಪ್ಪ, ನಿವೃತ್ತ ಡಿವೈ.ಎಸ್.ಪಿ. (ಎಫ್.ಪಿಬಿ) ಈಶಾನ್ಯ ವಲಯ, ಗುಲ್ಬರ್ಗಾ ರವರು ಪೊಲೀಸ್ ಇಲಾಖೆಯಲ್ಲಿ ಸೇವೆಗೆ ಸೇರುವುದಕ್ಕೆ ಮೊದಲು ಅಂದರೆ ದಿನಾಂಕ 26–5–1977 ರಿಂದ ದಿನಾಂಕ 3–11–1977ರ ವರೆಗೆ ಪ್ರೌಢ ಶಿಕ್ಷಣ ಮತ್ತು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಸಲ್ಲಿಸಿದ್ದು, ಸದರಿ ಸೇವೆಯಿಂದ ದಿನಾಂಕ 4–11–1977ರಂದು ಬಿಡುಗಡೆಗೊಂಡು ಪೊಲೀಸ್ ಇಲಾಖೆಯಲ್ಲಿ ಪಿ.ಎಸ್.ಐ. ಆಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಶ್ರೀಯುತರು ಪ್ರೌಢ ಶಿಕ್ಷಣ ಮತ್ತು ಕಾಲೇಜು ಶಿಕ್ಷಣ ಇಲಾಖೆಯಿಂದ ಬಿಡುಗಡೆ ಹೊಂದಿ ಪೊಲೀಸ್ ಇಲಾಖೆಯಲ್ಲಿ ಕರ್ತವ್ಯಕ್ಕೆ ಹಾಜರಾಗಿರುವುದರಿಂದ ಕೆ.ಸಿ.ಎಸ್.ಆರ್. ನಿಯಮ 224(ಎ)ರ ಪ್ರಕಾರ ದಿನಾಂಕ 26–5–1977 ರಿಂದ 3–11–1977ರ ವರೆಗೆ ಶಿಕ್ಷಣ ಇಲಾಖೆಯಲ್ಲಿ ಸಲ್ಲಿಸಿದ ಸೇವೆಯನ್ನು ಸದರಿಯವರ ನಿವೃತ್ತಿ ವೇತನ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆ ಎಂದು ಪರಿಗಣಿಸಲು ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 353 ಪೊಸಿಪ 2008, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಆರ್. ನಾರಾಯಣಪ್ಪ, ನಿವೃತ್ತ ಡಿವೈ.ಎಸ್.ಪಿ. ರವರು 26–5–1977 ರಿಂದ ದಿನಾಂಕ 3–11–1977ರ ವರೆಗೆ ಪ್ರೌಢ ಶಿಕ್ಷಣ ಮತ್ತು ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಪ್ರಥಮ ದರ್ಜೆ ಸಹಾಯಕರಾಗಿ ಸಲ್ಲಿಸಿದ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 224ಎ ರ ಪ್ರಕಾರ ನಿವೃತ್ತಿ ಸೌಲಭ್ಯಗಳಿಗೆ ಅರ್ಹತದಾಯಕ ಸೇವೆ ಎಂದು ಪರಿಗಣಿಸಿ ಆದೇಶಿಸಿದೆ. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 896 ವೆಚ್ಚ–6:08 ದಿನಾಂಕ 6–12–2008ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.841

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಡಾ: ಟಿ. ಅನ್ನಪೂರ್ಣ, ಹಿಂದಿನ ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಬೆಂಗಳೂರು ಪ್ರಸ್ತುತ ಅಂಗವಿಕಲರ ಕಲ್ಯಾಣಾಧಿಕಾರಿ, ಬೆಂಗಳೂರು (ಗ್ರಾ), ಇವರು ಅಮಾನತ್ತಿನಲ್ಲಿ ಕಳೆದ ಅವಧಿಗೆ ಅವರ ಹಕ್ಕಿನಲ್ಲಿರುವ ರಜೆ ಮಂಜೂರು ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:**

1. ಶ್ರೀ ಡಿ. ರಾಜಶೇಖರ ರೆಡ್ಡಿ, ನಂ. 2082, 11ನೇ ಅಡ್ಡ ರಸ್ತೆ, 2ನೇ ಮುಖ್ಯರಸ್ತೆ, ವಸಂತ ನಗರ, ಬೆಂಗಳೂರು ಇವರು ದಿ: 10–5–2007 ರಂದು ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಅಧ್ಯಕ್ಷರು, ಬಾಲಭವನ ಸೊಸೈಟಿ, ಬೆಂಗಳೂರು ಇವರಿಗೆ ನೀಡಿರುವ ದೂರು.
2. ಸರ್ಕಾರದ ಆದೇಶ ಸಂಖ್ಯೆ: ಮಮಇ 280 ಎಸ್‌ಜೆಡಿ 2007, ದಿ: 11–7–2007.
3. ಸರ್ಕಾರದ ಆದೇಶ ಸಂಖ್ಯೆ: ಮಮಇ 280 ಎಸ್‌ಜೆಡಿ 2007, ದಿ: 25–8–2007.
4. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಮಮಇ 280 ಎಸ್‌ಜೆಡಿ 2007, ದಿ: 28–9–2007.
5. ಸರ್ಕಾರದ ಆದೇಶ ಸಂಖ್ಯೆ: ಮಮಇ 280 ಎಸ್‌ಜೆಡಿ 2007, ದಿ: 20–3–2008.
6. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ನಿಸಿಶಿಪ/10/07–08, ದಿ: 22–4–2008.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ: 10–5–2007ರ ಪತ್ರದಲ್ಲಿ ಶ್ರೀ ರಾಜಶೇಖರ್ ರೆಡ್ಡಿ, ಬೆಂಗಳೂರು ಇವರು ಡಾ: ಅನ್ನಪೂರ್ಣ, ಆಡಳಿತಾಧಿಕಾರಿ, ಜವಾಹರ ಬಾಲಭವನ ಸೊಸೈಟಿ, ಬೆಂಗಳೂರು ಇವರ ಕಾರ್ಯವೈಖರಿಯ ವಿರುದ್ಧ ದೂರು ನೀಡಿ, ಸದರಿಯವರು ಸಾರ್ವಜನಿಕರೊಂದಿಗೆ ಸರಿಯಾಗಿ ವರ್ತಿಸುತ್ತಿಲ್ಲವೆಂದು ಹಾಗೂ ಬಾಲಭವನದ

ವಾಹನವನ್ನು ದುರುಪಯೋಗ ಪಡಿಸುತ್ತಿರುವುದಾಗಿ ತಿಳಿಸಿರುತ್ತಾರೆ. ಈ ಬಗ್ಗೆ ಡಾ: ಟಿ. ಅನ್ನಪೂರ್ಣರವರಿಗೆ ದಿ: 1–6–2007 ರಂದು ನೋಟೀಸ್ ನೀಡಲಾಗಿದ್ದು, ಅದಕ್ಕೆ ಪ್ರತಿಯಾಗಿ ಡಾ: ಟಿ. ಅನ್ನಪೂರ್ಣರವರು ದಿ: 3–6–2007 ರಂದು ನೀಡಿರುವ ತಮ್ಮ ವಿವರಣೆಯಲ್ಲಿ ದಿ: 10–5–2007 ರಂದು ಕಾರ್ಯದರ್ಶಿಗಳು ಬಾಲಭವನ ಸೊಸೈಟಿ ಇವರೊಡನೆ ಸ್ಥಳ ಭೇಟಿ ಮಾಡಲು ಹೋಗಿದ್ದುದ್ದಾಗಿ ಸುಳ್ಳು ವರದಿ ಮಾಡಿರುವುದು ಹಾಗೂ ವಾಹನವನ್ನು ಅವರ ಸ್ವಂತ ಕೆಲಸ ಕಾರ್ಯಗಳಿಗೆ ಉಪಯೋಗಿಸಿರುವುದು ಕಂಡು ಬಂದಿರುವ ಹಿನ್ನೆಲೆಯಲ್ಲಿ ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿ: 11–7–2007ರ ಆದೇಶದಲ್ಲಿ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 10(1)(ಎ) ರನ್ವಯ ಅಮಾನತ್ತಿನಲ್ಲಿಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿ: 25–8–2007ರ ಆದೇಶದಲ್ಲಿ ಡಾ: ಟಿ. ಅನ್ನಪೂರ್ಣ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿಯಿರಿಸಿ ಅವರನ್ನು ಅಮಾನತ್ತಿನಿಂದ ತೆರವುಗೊಳಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿ ಹುದ್ದೆಗೆ ನಿಯೋಜಿಸಿ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಮೇಲೆ (4)ರಲ್ಲಿ ಓದಲಾದ ದಿ: 28–9–2007ರಂದು ಆರೋಪಣಾ ಪಟ್ಟಿಯನ್ನು (ಅನುಬಂಧ 1–4 ರೊಂದಿಗೆ) ಕಾರಣ ಕೇಳುವ ನೋಟೀಸನ್ನು ಡಾ: ಟಿ. ಅನ್ನಪೂರ್ಣ ರವರಿಗೆ ಜಾರಿ ಮಾಡಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ದಿ: 20–3–2008ರ ಆದೇಶದಲ್ಲಿ ಡಾ: ಟಿ. ಅನ್ನಪೂರ್ಣ ಹಿಂದಿನ ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಬೆಂಗಳೂರು ಹಾಲಿ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರಿಗೆ ದಿ: 28–9–2007ರಂದು ಜಾರಿ ಮಾಡಿರುವ ಕಾರಣ ಕೇಳುವ ನೋಟೀಸನ್ನು ಹಿಂಪಡೆದು ಇನ್ನು ಮುಂದೆ ಇಂತಹ ಘಟನೆಗಳಿಗೆ ಆಸ್ಪದ ನೀಡದಂತೆ ಅವರಿಗೆ ಆಡಳಿತಾತ್ಮಕ ಎಚ್ಚರಿಕೆಯನ್ನು ನೀಡಿದೆ.

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿ: 22–4–2008ರ ಪತ್ರದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ರವರು ಡಾ: ಟಿ. ಅನ್ನಪೂರ್ಣ, ಹಿಂದಿನ ಆಡಳಿತಾಧಿಕಾರಿ, ಬಾಲಭವನ ಇವರನ್ನು ಸರ್ಕಾರವು ಆದೇಶ ಸಂಖ್ಯೆ: ಮಮಇ 280 ಎಸ್‌ಜೆಡಿ 2007, ದಿ: 20–3–2008ರಲ್ಲಿ ಇವರ ವಿರುದ್ಧದ ಇಲಾಖಾ ವಿಚಾರಣೆಯಿಂದ ದೋಷಮುಕ್ತಗೊಳಿಸಿ ಆದೇಶ ಹೊರಡಿಸಲಾಗಿದೆಯೆಂದು ಆದರೆ ಸದರಿಯವರ ಅಮಾನತ್ತು ಅವಧಿ ಪರಿಗಣನೆಯ ಬಗ್ಗೆ ಯಾವುದೇ ಆದೇಶ ಆಗಿರುವುದಿಲ್ಲವೆಂದು ತಿಳಿಸುತ್ತಾ, ಸದರಿಯವರ ಅಮಾನತ್ತಿನ ಅವಧಿಯ ಪರಿಗಣನೆ ಬಗ್ಗೆ ಸೂಕ್ತ ಆದೇಶ ನೀಡುವಂತೆ ಕೋರಿರುತ್ತಾರೆ. ಸರ್ಕಾರವು ನಿರ್ದೇಶಕರ ಪತ್ರವನ್ನು ಕೂಲಂಕಷವಾಗಿ ಪರಿಗಣಿಸಿದೆ. ಡಾ: ಅನ್ನಪೂರ್ಣ ಹಿಂದಿನ ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಅವರಿಗೆ "ಆಡಳಿತಾತ್ಮಕ ಎಚ್ಚರಿಕೆ" ನೀಡಿದ್ದು, ಅವರನ್ನು ಪೂರ್ಣವಾಗಿ ದೋಷಮುಕ್ತಗೊಳಿಸಿರುವುದಿಲ್ಲವಾದ್ದರಿಂದ ಅವರು ದಿ: 11–7–2007 ರಿಂದ 26–8–2007 ರವರೆಗಿನ ಅವಧಿಗೆ ಅವರ ಹಕ್ಕಿನಲ್ಲಿರುವ ರಜೆಯೆಂದು ಮಂಜೂರು ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 349 ಎಸ್‌ಜೆಡಿ 2007, ಬೆಂಗಳೂರು, ದಿನಾಂಕ: 25ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಡಾ: ಟಿ. ಅನ್ನಪೂರ್ಣ, ಹಿಂದಿನ ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಬೆಂಗಳೂರು, ಹಾಲಿ ಸಂಶೋಧನಾಧಿಕಾರಿ, ಪ್ರಧಾನ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು, ಇವರು ದಿ: 11–7–2007 ರಿಂದ 26–8–2007 ರವರೆಗೆ ಅಮಾನತ್ತಿನಲ್ಲಿ ಕಳೆದ ಅವಧಿಗೆ ಅವರ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1139

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಎಂ.ಎನ್. ನರಸಿಂಹಮೂರ್ತಿ, ಸಿ.ಪಿ.ಸಿ., ವಂಚನೆ ತನಿಖಾದಳ, ಸಿ.ಓ.ಡಿ., ಬೆಂಗಳೂರು, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಉಪ ನಿರೀಕ್ಷಕರು, ಸಿಓಡಿ, ಬೆಂಗಳೂರು ಇವರ ಆದೇಶ ಸಂಖ್ಯೆ:20/ಸಿಬ್ಬಂದಿ–3/ಡಿಇ/ಸಿಓಡಿ/2008–09 ದಿನಾಂಕ:10–06–2008.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಸಿಓಡಿ, ಬೆಂಗಳೂರು, ಇವರ ಆದೇಶ ಸಂಖ್ಯೆ:20/ಸಿಬ್ಬಂದಿ–3/ಡಿಇ/ಸಿಓಡಿ/2008–09 ದಿನಾಂಕ:23–08–2008.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05–09–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)76/2008–09, ದಿನಾಂಕ:04–12–08

**ಪ್ರಸ್ತಾವನೆ:**

ಶ್ರೀ ಎಂ.ಎನ್. ನರಸಿಂಹಮೂರ್ತಿ, ಸಿ.ಪಿ.ಸಿ., ವಂಚನೆ ತನಿಖಾದಳ, ಸಿ.ಓ.ಡಿ., ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ಶ್ರೀ ಎಂ.ಎನ್. ನರಸಿಂಹಮೂರ್ತಿ, ಸಿ.ಪಿ.ಸಿ., ವಂಚನೆ ತನಿಖಾದಳ, ಆದ ನೀವು ನಿಮ್ಮ ದಳದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಸುರೇಶ್ ಕುಮಾರ್, ಜ್ಯೂನಿಯರ್ ಆಡಿಟರ್, ರವರನ್ನು ಕಬ್ಬನ್ ಪಾರ್ಕ್ ಪೊಲೀಸ್ ಠಾಣೆ ಮೊ.ಸಂ:203/2004 ಕಲಂ 408–420 ಐಪಿಸಿ ಪ್ರಕರಣದಲ್ಲಿ ಹಣ ದುರುಪಯೋಗವಾಗಿರುವ ಬಗ್ಗೆ ದಾಖಲೆಗಳನ್ನು ಪರಿಶೀಲಿಸಿ, ಲೆಕ್ಕ ಪರಿಶೋದನೆ ನಡೆಸಲು ವಂಚನೆ ತನಿಖಾ ದಳದ ಕರ್ತವ್ಯದಿಂದ ದಿನಾಂಕ: 08–01–07 ರಂದು ಬಿಡುಗಡೆ ಗೊಳಿಸಿ ಎಸ್.ಪಿ. ವಿಶೇಷ ವಿಚಾರಣೆ ದಳ ರವರಲ್ಲಿ ವರದಿ ಮಾಡಿಕೊಳ್ಳುವಂತೆ ಸೂಚಿಸಿದ್ದರೂ ಸಹ ನೀವು ನೈಜತೆಯನ್ನು ಪರಿಶೀಲಿಸದೆ ಹಾಜರಾತಿ ಪುಸ್ತಕದಲ್ಲಿ ಅವರ ಹೆಸರಿನ ಮುಂದೆ "ಡಿ" (ಡ್ಯೂಟಿ) ಎಂದು ನಮೂದಿಸಿ ಹಾಗೂ ದಿನವಹಿ ಹಾಜರಾತಿ ಪಟ್ಟಿಯಲ್ಲಿ ವಿಶೇಷ ವಿಚಾರಣಾ ದಳದ ಮೇಲ್ಕಂಡ ಪ್ರಕರಣದಲ್ಲಿ ಆಡಿಟ್ ಬಗ್ಗೆ ಓಓಡಿ ಕರ್ತವ್ಯ ಎಂದು ಸುಳ್ಳು ನಮೂದಿಸಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಉಪ ನಿರೀಕ್ಷಕರು, ಸಿಓಡಿ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 10–06–2008ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಸಿಓಡಿ, ಬೆಂಗಳೂರು, ಇವರ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಿ, ಇವರ ವಾರ್ಷಿಕ ವೇತನ ಬಡ್ತಿಯನ್ನು 3 ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:23–08–2008ರ ಆದೇಶದಲ್ಲಿ ವಿಧಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 296 ಪೊಸಿಅ 2008 ಬೆಂಗಳೂರು, ದಿನಾಂಕ 18ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎನ್. ನರಸಿಂಹಮೂರ್ತಿ, ಸಿ.ಪಿ.ಸಿ., ವಂಚನೆ ತನಿಖಾದಳ, ಸಿ.ಓ.ಡಿ., ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 840

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಡಿ.ಎಸ್. ಶ್ರೀಕಂಠ, ಎ.ಪಿ.ಸಿ.–36, ಡಿ.ಎ.ಆರ್. ಮಂಡ್ಯ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)ಪಿಆರ್/35/06–07 ಓಬಿ:326/06–07 ದಿನಾಂಕ:03–02–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/11/2007–08 ದಿನಾಂಕ:17–09–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:03–01–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)120/2007–08, ದಿನಾಂಕ:06–09–2008.

**ಪ್ರಸ್ತಾವನೆ:**

ಶ್ರೀ ಡಿ.ಎಸ್. ಶ್ರೀಕಂಠ, ಎ.ಪಿ.ಸಿ.–36, ಡಿ.ಎ.ಆರ್. ಮಂಡ್ಯ ಜಿಲ್ಲೆ, ಇವರ ವಿರುದ್ಧ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಎಸಗಿರುವ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕಾರಣಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

"ಮಂಡ್ಯ ಜಿಲ್ಲಾ ಸಶಸ್ತ್ರ ಮೀಸಲು ಪಡೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರನ್ನು ಕರ್ತವ್ಯದ ಅಧಿಕಾರಿಗಳು ದಿ:03–11–2006 ರಂದು ಮೈಸೂರಿನ ಆರೋಪಿಗೆ ಗಾರ್ಡ್ ಕೆಲಸಕ್ಕೆ ನೇಮಿಸಿದಾಗ, ಸದರಿ ಕೆಲಸಕ್ಕೆ ಹೋಗಲು ನಿರಾಕರಿಸಿರುತ್ತಾರೆ. ಈ ರೀತಿಯಾಗಿ ಇವರು ಮೇಲಾಧಿಕಾರಿಗಳ ಆದೇಶವನ್ನು ಉಲ್ಲಂಘನೆ ಮಾಡುವುದರ ಮೂಲಕ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಎಸಗಿರುತ್ತಾರೆ".

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮಂಡ್ಯ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:03–02–2007ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳು ಕಾಲ ಮುಂದಿನ ವಾರ್ಷಿಕ ವೇತನಬಡ್ತಿಗಳಿಗೆ ತೊಂದರೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:17–09–07ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 85 ಪೊಸಿಅ 2008 ಬೆಂಗಳೂರು, ದಿನಾಂಕ 17ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಎಸ್. ಶ್ರೀಕಂಠ, ಎ.ಪಿ.ಸಿ.–36, ಡಿ.ಎ.ಆರ್. ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.839

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಿ. ವೆಂಕಟಪ್ಪ, ಸಿ.ಪಿ.ಸಿ.–112, ಸಿ.ಎಸ್.ಪುರ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಪನ್ನಿ/ಡಿಇ/10/ 2007–08 ಓ.ಬಿ:393/2007 ದಿ:16–08–07.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು31/2007-08 ಓ.ಬಿ:183 ದಿನಾಂಕ:12-02-2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08-08-2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)55/2008-09, ದಿನಾಂಕ:20-10-08.

**ಪ್ರಸ್ತಾವನೆ:**

ಶ್ರೀ ಜಿ. ವೆಂಕಟಪ್ಪ, ಸಿ.ಪಿ.ಸಿ.-112, ಸಿ.ಎಸ್.ಪುರ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅನಧಿಕೃತ ಗೈರುಹಾಜರಾದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ನೀವು ದಿ:21-09-2005 ರಂದು ವೈದ್ಯಕೀಯ ಚಿಕಿತ್ಸೆಗಾಗಿ ಎಂ.ಎಚ್.ಎಸ್.ಅನ್ನು ಪಡೆದುಕೊಂಡು ಹೋಗಿದ್ದು, ಯಾವ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದೀರಿ ಎಂಬ ಬಗ್ಗೆ ಯಾವುದೇ ಮಾಹಿತಿಯನ್ನು ನೀಡಿರುವುದಿಲ್ಲ. ಕೇಂದ್ರಸ್ಥಾನವನ್ನು ಬಿಟ್ಟು ಹೋಗಲು ಯಾವುದೇ ಪೂರ್ವಾನುಮತಿಯನ್ನು ಪಡೆದಿರುವುದಿಲ್ಲ. ನೀವು ಸಲ್ಲಿಸಿರುವ ವೈದ್ಯಕೀಯ ಪ್ರಮಾಣ ಪತ್ರಗಳನ್ನು ಪರಿಶೀಲಿಸಲಾಗಿ ನೀವು ಹೊರ ರೋಗಿಯಾಗಿ ಚಿಕಿತ್ಸೆ ಪಡೆದಂತೆ ಇರುತ್ತದೆ. ನೀವು ಚಿಕಿತ್ಸೆ ಪಡೆಯುತ್ತಿರುವ ಬಗ್ಗೆ ನಿಮ್ಮ ಮೇಲಾಧಿಕಾರಿಗಳಿಗೆ ತಿಳಿಸಲು ಯಾವುದೇ ಅಡ್ಡಿ ಆತಂಕಗಳು ಇರಲಿಲ್ಲ. ನೀವು ಎನ್.ಇ.ಪಿ.ಎಸ್. ಮೊ.ಸಂ.191/2005 ಕಲಂ 341-506-307 ರೆ/ವಿ 34 ಐ.ಪಿ.ಸಿ. ಪ್ರಕರಣದಲ್ಲಿ ಆರೋಪಿಯಾಗಿದ್ದು, ದಸ್ತಗಿರಿ ಆಗದಂತೆ ತಪ್ಪಿಸಿಕೊಳ್ಳಲು ಅನಾರೋಗ್ಯದ ನೆಪವೊಡ್ಡಿರುವುದು ಕಂಡು ಬರುತ್ತದೆ. ಆದುದರಿಂದ ನೀವು ದಿ:21-09-2005 ರಿಂದ 25-06-06 ರವರೆಗೆ ಗೈರುಹಾಜರಾಗಿ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 16-08-07ರ ಆದೇಶದಲ್ಲಿ ಅರ್ಜಿದಾರರಿಗೆ ದಿ:21-09-2005 ರಿಂದ 25-06-06 ರವರೆಗಿನ ಅವಧಿಯನ್ನು ವೇತನರಹಿತ ರಜೆ ಎಂದು ಪರಿಗಣಿಸಿ ಆದೇಶಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:16-08-2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 248 ಪೊಸಿಅ 2008 ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ವೆಂಕಟಪ್ಪ, ಸಿ.ಪಿ.ಸಿ.-112, ಸಿ.ಎಸ್.ಪುರ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.838

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಗುಂಡಪ್ಪ, ಎ.ಎಸ್.ಐ. ಬಸವನಹಳ್ಳಿ ಪೊಲೀಸ್ ಠಾಣೆ, ತುಮಕೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು, ಇವರ ಆದೇಶ ಸಂಖ್ಯೆ: ಪನ್ನಿ/82/2007–08 ಓಬಿ:36/2008, ದಿ:14–01–2008.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು6/2007–08 ಓ.ಬಿ:35/2008–09 ದಿನಾಂಕ:28–05–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:14–08–2009.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)58/2008–09, ದಿನಾಂಕ:23–10–08

**ಪ್ರಸ್ತಾವನೆ:**

ಶ್ರೀ ಗುಂಡಪ್ಪ, ಎ.ಎಸ್.ಐ. ಬಸವನಹಳ್ಳಿ ಪೊಲೀಸ್ ಠಾಣೆ, ತುಮಕೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನವನ್ನು ತೋರಿಸಿದ ಹಿನ್ನೆಲೆಯಲ್ಲಿ ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿಯಲ್ಲಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ಗೌರಿಬಿದನೂರು ಮತ್ತು ಹಿಂದೂಪುರ ಲಾರಿಗಳ ಮಾಲೀಕರೊಂದಿಗೆ ಶಾಮೀಲಾಗಿ ಬಡವನಹಳ್ಳಿ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಕಿತ್ತಗಳಿ ಕಡೆಯಿಂದ ಅಕ್ರಮವಾಗಿ ಮರಳು ಸಾಗಣೆ ಮಾಡಲು ಅವಕಾಶ ಮಾಡಿಕೊಟ್ಟಿದ್ದು, ಇದನ್ನು ನಿಯಂತ್ರಿಸಲು ವಿಫಲರಾಗಿರುತ್ತೀರಿ. ಇದು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನವನ್ನು ತೋರಿಸಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 14–01–2008ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ವರ್ಷಕಾಲ ಮುಂದೂಡುವ ದಂಡನೆ ವಿಧಿಸಿರುತ್ತಾರೆ."

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:28–05–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 265 ಪೊಸಿಅ 2008 ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಗುಂಡಪ್ಪ, ಎ.ಎಸ್.ಐ.ಬಸವನಹಳ್ಳಿ ಪೊಲೀಸ್ ಠಾಣೆ, ತುಮಕೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.835

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್. ರಾಮಚಂದ್ರಪ್ಪ, ಸಿ.ಪಿ.ಸಿ.–1348, ನ್ಯೂಟೌನ್ ಪೊಲೀಸ್ ಠಾಣೆ, ಭದ್ರಾವತಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ ಇವರ ಆದೇಶ ಸಂಖ್ಯೆ ಸಿಬ್ಬಂದಿ(4)ಶಿಕ್ಷೆ/140/07 ಓ.ಬಿ:585/07, ದಿ:31–01–08.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 47/ಅಪೀಲು/ಸಿಬ್ಬಂದಿ/2/2007–08 ಓ.ಬಿ:08/08–09 ದಿನಾಂಕ: 11–04–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:01–08–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)54/2008–09, ದಿನಾಂಕ:24–11–08.

**ಪ್ರಸ್ತಾವನೆ:**

ಶ್ರೀ ಎಚ್. ರಾಮಚಂದ್ರಪ್ಪ, ಸಿ.ಪಿ.ಸಿ.–1348, ನ್ಯೂಟೌನ್ ಪೊಲೀಸ್ ಠಾಣೆ, ಭದ್ರಾವತಿ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುವ ಕಾರಣ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

> "ನೀವು ನ್ಯೂಟೌನ್ ಪೊಲೀಸ್ ಠಾಣಾ ವ್ಯಾಪ್ತಿಯ 1ನೇ ವಾರ್ಡ್ ಕರ್ತವ್ಯಕ್ಕೆ ನೇಮಕವಾಗಿದ್ದು, ನಿಮ್ಮ ವಾರ್ಡ್‌ನಲ್ಲಿ ದಿ:12–09–07 ರಂದು ಮೂರ್ತಿ ಬಿನ್ ಗೋವಿಂದಪ್ಪ, ಭಂಡಾರಹಳ್ಳಿ ಭದ್ರಾವತಿ, ಇವರು ಕಡದಕಟ್ಟೆ ಶಿವಲಿಂಗಯ್ಯ ರವರ ವಾಸದ ಮನೆ ಓಣಿಯಲ್ಲಿ ಕಾನೂನು ಬಾಹಿರವಾಗಿ ಮಟ್ಕಾ ಜೂಜಾಟ ನಡೆಸುತ್ತಿದ್ದರೂ ಸಹ ಈ ಬಗ್ಗೆ ಮಾಹಿತಿ ಸಂಗ್ರಹಿಸದೇ ಮಟ್ಕಾ ಜೂಜಾಟ ನಿಯಂತ್ರಿಸುವಲ್ಲಿ ವಿಫಲರಾಗಿರುವುದಲ್ಲದೆ ಭದ್ರಾವತಿ ನ್ಯೂಟೌನ್ ಪೊಲೀಸ್ ಠಾಣೆಯಲ್ಲಿ ಗುನ್ನೆ ನಂ:75/07 ಕಲಂ 78 ಕ್ಲಾಸ್ (3) ಕೆ.ಪಿ.ಆಕ್ಟ್ ರೀತ್ಯಾ ಪ್ರಕರಣ ದಾಖಲಾಗಲು ಕಾರಣರಾಗಿ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 31–01–08ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ".

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:11–04–2008ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 247 ಪೊಸಿಅ 2008 ಬೆಂಗಳೂರು, ದಿನಾಂಕ 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್. ರಾಮಚಂದ್ರಪ್ಪ, ಸಿ.ಪಿ.ಸಿ.–1348, ನ್ಯೂಟೌನ್ ಪೊಲೀಸ್ ಠಾಣೆ, ಭದ್ರಾವತಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.834

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎನ್.ಎಸ್. ಶೆಟ್ಟಣ್ಣವರ, ಪಿ.ಸಿ., ಮೂಡಲಗಿ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಇವಿ/17/2006ಆ.ಪು:ಸಂ:963/2007 ದಿ:17–10–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು 5/ಉವ/2008 ದಿನಾಂಕ:06–05–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:17–07–08.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)47/2008–09, ದಿನಾಂಕ:13–10–2008.

**ಪ್ರಸ್ತಾವನೆ:**

ಶ್ರೀ ಎನ್.ಎಸ್. ಶೆಟ್ಟಣ್ಣವರ, ಪಿ.ಸಿ.–2316, ಮೂಡಲಗಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಖಾನಾಪುರ ಪೊಲೀಸ್ ಠಾನೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ತೋರಿಸಿದ್ದಾರೆ ಎಂಬ ಕಾರಣಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

"ಸಿ.ಪಿ.ಸಿ.–2316 ಎನ್.ಎಸ್. ಶೆಟ್ಟಣ್ಣವರ ಖಾನಾಪೂರ ಠಾಣೆ ಹಾಲಿ ಮೂಡಲಗಿ ಠಾಣೆಯವರಾದ ನೀವು ದಿ:08–06–2002 ರಿಂದ 25–07–2006 ರವರೆಗೆ ಖಾನಾಪೂರ ಠಾಣೆಯಲ್ಲಿ ಬರಹಗಾರರೆಂದು ಕರ್ತವ್ಯ ನಿರ್ವಹಿಸಿದ್ದು ಆ ಕಾಲಕ್ಕೆ ರಮೇಶ ಲಕ್ಷ್ಮಣ ದೇಸಾಯಿ ಸಾ:–ಜಾಂಬೋಟಿ ಇವರಿಗೆ ಬೆಳೆ ಸಂರಕ್ಷಣೆಯ ಆಯುಧ ಅನುಜ್ಞಾ ಪತ್ರ ಶಿಫಾರಸ್ಸ ವರದಿಗೆ ಮತ್ತು ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳಿಗೆ ಹಾಗೂ ಅರ್ಜಿ ರಿಜಿಸ್ಟರದ ತಿಂಗಳ ಕೊನೆಗೆ ಹಾಕಲಾದ ಘೋಷ್ವಾರಗಳಿಗೆ ಪಿ.ಎಸ್.ಐ. ರವರ ಸಹಿಯನ್ನು ನೀವೆ ಮಾಡಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಮತ್ತು ವಿಮುಖತೆಯನ್ನು ತೋರ್ಪಡಿಸಿರುವಿರಿ ಆದ್ದರಿಂದ ನಿಮ್ಮ ಮೇಲೆ ಈ ದೋಷಾರೋಪಣೆ ಇರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:17–10–2007ರ ಆದೇಶದಲ್ಲಿ ಅರ್ಜಿದಾರರಿಗೆ ಪೊಲೀಸ್ ಪೇದೆ ಹುದ್ದೆಯ ಕನಿಷ್ಠ ಮೂಲವೇತನಕ್ಕೆ ಇಳಿಸಿ, ಹೊಸದಾಗಿ ವೇತನ ಬಡ್ತಿಯನ್ನು ಗಳಿಸುವುದು ಹಾಗೂ ದಿ:03–09–06 ರಿಂದ 16–10–2006ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಶಿಸ್ತುಪ್ರಾಧಿಕಾರವು ವಿಧಿಸಿದ ದಂಡನೆಯು ನಿರ್ದಿಷ್ಠವಾಗಿರದ ಕಾರಣ ಶಿಸ್ತುಪ್ರಾಧಿಕಾರದ ದಿ:06–05–08ರ ಆದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಮೂಲ ವೇತನವನ್ನು ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ಮೂಲ ವೇತನಕ್ಕೆ ಎರಡು ವರ್ಷಗಳ ಕಾಲ ಇಳಿಸಿ ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವುದು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 06–05–2008ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 216 ಪೊಸಿಅ 2008 ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್.ಎಸ್. ಶೆಟ್ಟಣ್ಣವರ, ಪಿ.ಸಿ.–2316, ಮೂಡಲಗಿ ಪೊಲೀಸ್ ಠಾಣೆ, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.833

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಟಿ.ಕೆ. ರಾಜಶೇಖರಪ್ಪ, ಪಿ.ಸಿ.–611, ಚಿಕ್ಕಜಾಜೂರು ಪೊಲೀಸ್ ಠಾಣೆ, ಚಿತ್ರದುರ್ಗ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ(2)ಪಿಆರ್/129/2007 ಓಬಿ:470/07–08 ದಿನಾಂಕ:27–12–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ: 44/ಅಪೀಲು/ಸಿಬ್ಬಂದಿ–2/2007–08 ಓ.ಬಿ:05/2008–09, ದಿನಾಂಕ: 08–04–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16–07–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)41/2008–09, ದಿನಾಂಕ:02–12–2008

**ಪ್ರಸ್ತಾವನೆ:**

ಶ್ರೀ ಟಿ.ಕೆ. ರಾಜಶೇಖರಪ್ಪ, ಪಿ.ಸಿ.–611, ಚಿಕ್ಕಜಾಜೂರು, ಚಿತ್ರದುರ್ಗ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

"ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಒಬ್ಬ ಜವಾಬ್ದಾರಿಯುತ ಪೊಲೀಸ್ ಸಿಬ್ಬಂದಿಯಾಗಿ ಮೇಲಾಧಿಕಾರಿಗಳ ಅನುಮತಿ ಪಡೆಯದೆ ದಿ: 09–11–2007 ರಂದು ಸುಮಾರು 18.30ರ ಸಮಯದಲ್ಲಿ ನೇಮಿಸಿದ ಕರ್ತವ್ಯದ ಸ್ಥಳದಲ್ಲಿ ಇರದೆ ಗೈರುಹಾಜರಾಗಿದ್ದು, ಅಲ್ಲದೆ ಅದೇ ದಿನ ಸಾಯಂಕಾಲ ಠಾಣೆಯಲ್ಲಿ ಎಸ್ಎಚ್ಓ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಿ.ಎಚ್.ಸಿ.–269, ಎಚ್.ಬಿ.ಮಲ್ಲಿಕಾರ್ಜುನಪ್ಪ, ರವರೊಂದಿಗೆ ಸಾರ್ವಜನಿಕರ ಎದುರಿಗೆ ಏರುಧ್ವನಿಯಲ್ಲಿ ಕೂಗಾಡಿ ಅಸಭ್ಯ, ಅವಾಚ್ಯ ಶಬ್ದಗಳಿಂದ ನಿಂದಿಸಿ ಇಲಾಖೆಯ ಘನತೆ ಗೌರವಗಳಿಗೆ ಕುಂದು ತರುವಂತೆ ವರ್ತಿಸಿ, ಕರ್ತವ್ಯದಲ್ಲಿ ಘೋರ ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿದ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:27–12–2007ರ ಆದೇಶದಲ್ಲಿ ಅರ್ಜಿದಾರರರನ್ನು ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ಬಡ್ತಿಗೆ ಪರಿಣಾಮ ಬೀರದಂತೆ ಒಂದು ವರ್ಷಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 08–04–2008ರ ಆದೇಶದಲ್ಲಿ ವಿಧಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ

ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 215 ಪೊಸಿಅ 2008 ಬೆಂಗಳೂರು, ದಿನಾಂಕ 18ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಕೆ. ರಾಜಶೇಖರಪ್ಪ, ಪಿ.ಸಿ.-611, ಚಿಕ್ಕಜಾಜೂರು, ಚಿತ್ರದುರ್ಗ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.832

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ.ಎಸ್. ಸತ್ಯನಾರಾಯಣ, ಮಾಜಿ ಪೊಲೀಸ್ ಸಬ್-ಇನ್ಸ್‌ಪೆಕ್ಟರ್, ಚಿಕ್ಕಬಳ್ಳಾಪುರ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಪನ್ನಿ: ಡಿಇ/15/2005-06 ಓಬಿ:43/2007-08 ದಿನಾಂಕ:25-10-07.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(6)79/ 2007-08 ಓ.ಬಿ:8/ 2008-09 ದಿನಾಂಕ:28-04-08.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09-06-2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)31/2008-09, ದಿನಾಂಕ:24-11-2008.

**ಪ್ರಸ್ತಾವನೆ:**

ಶ್ರೀ ಸಿ.ಎಸ್. ಸತ್ಯನಾರಾಯಣ, ಇವರು ಈ ಹಿಂದೆ ಮಧುಗಿರಿ ಪೊಲೀಸ್ ಠಾಣೆಯಲ್ಲಿ (ಅಪರಾಧ ವಿಭಾಗ) ಪೊಲೀಸ್ ಸಬ್-ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇಲಾಖೆಗೆ ಹಾಗೂ ಸರ್ಕಾರಕ್ಕೆ ಮೋಸವೆಸಗಿ ಪೊಲೀಸ್ ಅಧಿಕಾರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡು ಅತೀವ ದುರ್ನಡತೆ ಪ್ರದರ್ಶಿಸಿರುವ ಆರೋಪದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

> "ಶ್ರೀ. ಸಿ.ಎಸ್. ಸತ್ಯನಾರಾಯಣ (ಮೂಲ ಹೆಸರು ಸಿ.ಎಸ್.ನಾಗರಾಜು) ಪಿ.ಎಸ್.ಐ. ಮಧುಗಿರಿ ಠಾಣೆ (ಅಪರಾಧ ವಿಭಾಗ) ಆದ ನೀವು ನಿಮ್ಮ ನಿಜವಾದ ಹೆಸರು ಸಿ.ಎಸ್. ನಾಗರಾಜ ಎಂದು ಇದ್ದರೂ ಸಹಾ ದಿ:26-04-1974 ರಂದು ಕೋಲಾರ ಜಿಲ್ಲೆಯಲ್ಲಿ ನಿಮ್ಮ ತಮ್ಮನಾದ ಶ್ರೀ ಸಿ.ಎಸ್. ಸತ್ಯನಾರಾಯಣ, ರವರ ಎಸ್.ಎಸ್.ಎಲ್.ಸಿ. ಅಂಕಪಟ್ಟಿಯನ್ನು ಪಡೆದು, ಆ ಹೆಸರಿನಲ್ಲಿಯೇ ಪೇದೆಯಾಗಿ ನೇಮಕಗೊಂಡು ದಿನಾಂಕ: 01-05-1974 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡು ಮತ್ತು ನಿಮ್ಮ ತಮ್ಮನ ಹೆಸರಿನಲ್ಲಿನ ವಿದ್ಯಾಭ್ಯಾಸದ ಪ್ರಮಾಣಪತ್ರಗಳನ್ನು ದುರುಪಯೋಗ ಪಡಿಸಿಕೊಂಡು, ತದನಂತರ ಇಲಾಖೆಯಲ್ಲಿ ಇಲ್ಲಿಗೆ 31 ವರ್ಷಗಳಿಂದ ಹಂತ ಹಂತವಾಗಿ ಬಡ್ತಿ ಹೊಂದಿ ಸರ್ಕಾರದಿಂದ ಒಬ್ಬ ಪೊಲೀಸ್ ಅಧಿಕಾರಿಗೆ ಸಿಗಬೇಕಾದ ಎಲ್ಲಾ ಸವಲತ್ತುಗಳನ್ನು ಪಡೆದು ಅನುಭವಿಸುತ್ತಾ ಪೊಲೀಸ್ ಇಲಾಖೆಗೆ ಹಾಗೂ ಸರ್ಕಾರಕ್ಕೆ ಮೋಸವೆಸಗಿ ಒಬ್ಬ ಶಿಸ್ತು ಪೊಲೀಸ್ ಅಧಿಕಾರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡು ಇಲಾಖೆಯ ನಿಯಮಾವಳಿಗೆ ವಿರುದ್ಧವಾಗಿ ವರ್ತಿಸಿ ಅತೀವ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:

25–10–07ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ, ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೆ ಪರಿಗಣಸುವ ದಂಡನೆಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 28–04–2008ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 258 ಪೊಸಿಅ 2008 ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಎಸ್. ಸತ್ಯನಾರಾಯಣ, ಮಾಜಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಚಿಕ್ಕಬಳ್ಳಾಪುರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 831

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಎ. ಖಾದರ್, ಪಿ.ಎಸ್.ಐ., ಜೆಸ್ಕಾಂ, ಜಾಗೃತದಳ ಪೊಲೀಸ್ ಠಾಣೆ, ಬೀದರ್, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಇವಿ06/ಈವ/2006 ಅಪು ಸಂ:316/ಈವ/2006 ದಿನಾಂಕ:15–05–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(6)/36/2006–07 ದಿನಾಂಕ:03–11–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12–02–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)6/2007–08, ದಿನಾಂಕ:17–04–2008.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 78 ಸಿಎನ್‌ಎಸ್ 2008 ದಿನಾಂಕ:04–10–2008.

**ಪ್ರಸ್ತಾವನೆ:**

ಶ್ರೀ ಎಸ್.ಎ. ಖಾದರ್, ಪಿ.ಎಸ್.ಐ., ಜೆಸ್ಕಾಂ, ಜಾಗೃತದಳ ಪೊಲೀಸ್ ಠಾಣೆ, ಇವರು ರಾಯಚೂರು ಜಿಲ್ಲೆಯ ತುರ್ವಿಹಾಳ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನವೆಸಗಿದ ಕಾರಣಕ್ಕಾಗಿ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ಮತ್ತು 8ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಈ ಹಿಂದೆ ರಾಯಚೂರು ಜಿಲ್ಲೆಯ ತುರ್ವಿಹಾಳ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ:26–10–2004 ರಂದು ಸಾಯಂಕಾಲ 4–00 ಘಂಟೆ ಸುಮಾರಿಗೆ ತುರ್ವಿಹಾಳ ಪೊಲೀಸ್ ಠಾಣೆ, ಗುನ್ನೆ ನಂ:102/2004ರ ಫಿರ್ಯಾದುದಾರ ಹನುಮಂತ ಈತನ ಮಗ ಬಸವರಾಜನಿಗೆ ಶ್ರೀ.ಶಿವಶಂಕರಗೌಡ, ಈತನು ಜಾತಿ ನಿಂದನೆ ಮಾಡಿದ ಬಗ್ಗೆ ಫಿರ್ಯಾಧಿ ಕೊಟ್ಟರೂ ಪ್ರಕರಣ ದಾಖಲಿಸದೆ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ ಎಸಗಿರುತ್ತಾರೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 15–05–2006ರ ಆದೇಶದಲ್ಲಿ "ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯ ಎರಡು ಹಂತಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಆದೇಶಿಸಿ ಸೇವಾವಧಿಯವರೆಗೆ ಇಳಿಸಿರುವ ದಂಡನೆ"ಯನ್ನು ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಅ.ಪೊ.ಅ.ರವರ ವಿರುದ್ಧ ಹೊರಿಸಲಾದ ಆರೋಪವು ಯಾವುದೇ ಸಂಶಯಕ್ಕೆ ಆಸ್ಪದವಿಲ್ಲದಂತೆ ದೃಢಪಟ್ಟಿರುತ್ತದೆ. ಆದರೆ ಶಿಸ್ತುಪ್ರಾಧಿಕಾರವು ಹೊರಡಿಸಿದ ದಂಡನಾದೇಶವು ಕರ್ನಾಟಕ ನಾಗರೀಕ ಸೇವಾ ನಿಯಮಗಳು 59(1)(ಬಿ)ಗೆ ವ್ಯತಿರಿಕ್ತವಾಗಿರುವುದರಿಂದ ಸದರಿ ಆದೇಶವು ತಾಂತ್ರಿಕ ದೋಷವುಳ್ಳದ್ದಾಗಿರುವುದರಿಂದ ದಂಡನಾದೇಶವನ್ನು ಮಾರ್ಪಡಿಸಿ, ಇವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಎರಡು ವರ್ಷಗಳ ಕಾಲ ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಮುಂದೂಡಿ, ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:03–11–2006ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿ ಅರ್ಜಿದಾರರ ವಿರುದ್ಧ ಆರೋಪ ಸಾಬೀತಾಗಿದೆ. ಆದರೆ ಎಸಗಿರುವ ಆರೋಪಕ್ಕೆ ವಿಧಿಸಿರುವ ದಂಡನೆಯು ಹೆಚ್ಚಿನದಾಗಿರುವುದೆಂದು ಪರಿಗಣಿಸಿ ಈ ಕುರಿತು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಓದಲಾದ 5ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 364 ಪೊಸಿಅ 2007 ಬೆಂಗಳೂರು, ದಿನಾಂಕ: 06ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಎಸ್.ಎ. ಖಾದರ್, ಪಿ.ಎಸ್.ಐ., ಜೆಸ್ಕಾಂ, ಜಾಗೃತದಳ ಪೊಲೀಸ್ ಠಾಣೆ, ಬೀದರ್, ಇವರ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.96

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ನಾರಾಯಣಶೆಟ್ಟಿ, ಸಿ.ಪಿ.ಸಿ.–442, ಶೃಂಗೇರಿ ಪೊಲೀಸ್ ಠಾಣೆ, ಚಿಕ್ಕಮಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ (8)7/2005–06 ದಿನಾಂಕ:11–06–2007.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:31–08–2007.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)7/2005–06, ದಿನಾಂಕ:28–02–2008.

**ಪ್ರಸ್ತಾವನೆ:**

ಶ್ರೀ ನಾರಾಯಣಶೆಟ್ಟಿ, ಸಿ.ಪಿ.ಸಿ.–442, ಶೃಂಗೇರಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಹಾಗೂ ಇತರರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆಗೆ 8ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲು ಆಧೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ಶ್ರೀ. ನಾರಾಯಣಶೆಟ್ಟಿ, ಸಿ.ಪಿ.ಸಿ.–442, ಆಗಿರುವ ನೀವು ದಿ:12–06–03 ರಿಂದ ಶೃಂಗೇರಿ ಪೊಲೀಸ್ ಠಾಣೆಯಲ್ಲಿ ಸೇವೆ ಸಲ್ಲಿಸುತ್ತಿದ್ದೀರಿ. ಶೃಂಗೇರಿ ಪೊಲೀಸ್ ಠಾಣಾ ಸರಹದ್ದಿನಲ್ಲಿ ಮಗ್ಗೇಬೈಲು ಚಂದ್ರಶೇಖರರಾವ್ ರವರಿಗೆ ನಕ್ಸಲೀಯರು

ತೊಂದರೆ ಕೊಡುತ್ತಿರುವ ಬಗ್ಗೆ ಅವರ ರಕ್ಷಣೆಗಾಗಿ ಮನೆಗೆ ಗಾರ್ಡ್ ಕರ್ತವ್ಯಕ್ಕೆ ನಿಮ್ಮನ್ನು ನೇಮಿಸಲಾಗಿತ್ತು. ದಿ:07–10–04 ರಂದು ಅಲ್ಲಿ ನೀವು ಗಾರ್ಡ್ ಕರ್ತವ್ಯವನ್ನು ನಿರ್ವಹಿಸದೇ, ಮೇಲಾಧಿಕಾರಿಗಳಿಗೂ ತಿಳಿಸದೇ, ನಿಮಗೆ ನೀಡಿದ ಸರ್ಕಾರಿ ಸೊತ್ತುಗಳಾದ ಎಸ್‌ಎಲ್‌ಆರ್. ಬಂದೂಕು ಹಾಗೂ ಮದ್ದುಗುಂಡುಗಳನ್ನು ಸುರಕ್ಷಿತವಾಗಿ ಇಟ್ಟುಕೊಳ್ಳದೇ, ಮೇಲಾಧಿಕಾರಿಗಳಿಂದ ಪೂರ್ವಾನುಮತಿಯನ್ನೂ ಪಡೆಯದೇ ಕರ್ತವ್ಯದ ಸ್ಥಳವನ್ನು ತೊರೆದು ಗೈರುಹಾಜರಾಗಿರುತ್ತೀರಿ. ಸರ್ಕಾರಿ ಸೊತ್ತನ್ನು ನೀವು ರಕ್ಷಿಸದೆ ನಕ್ಸಲೀಯರು ತೆಗೆದುಕೊಂಡು ಹೋಗಲು ಕಾರಣರಾಗಿ ತೀವ್ರ ತರಹದ ಕರ್ತವ್ಯಲೋಪವನ್ನು ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 11–06–2007ರ ಆದೇಶದಲ್ಲಿ ಅರ್ಜಿದಾರರ "ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಒಂದು ವರ್ಷದ ಕಾಲ ಮುಂದೂಡುವ ದಂಡನೆ" ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪವು ಸಾಬೀತಾಗಿದ್ದು, ಪರಿಷ್ಕರಣ ಮೇಲ್ಮನವಿಯಲ್ಲಿ ಕರ್ತವ್ಯಚ್ಯುತಿ ಮಾಡದಿರುವುದಕ್ಕೆ ಪರೋಕ್ಷ ಕಾರಣಗಳಾಗಲಿ ಅಥವಾ ಹೊಸ ಸಮರ್ಥನೆಯನ್ನು ನೀಡಿರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 92 ಪೊಸಿಅ 2008 ಬೆಂಗಳೂರು, ದಿನಾಂಕ 17ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾರಾಯಣಶೆಟ್ಟಿ, ಸಿ.ಪಿ.ಸಿ.–442, ಶೃಂಗೇರಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.440

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್.ಬಿ. ಮುದ್ದುರಾಜು, ಸಿ.ಪಿ.ಸಿ.–130, ಚಿಕ್ಕನಾಯಕನಹಳ್ಳಿ, ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಪನ್ಸಿ/03/2007, ದಿನಾಂಕ:26–06–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಪನ್ಸಿ/ಡಿಇ/12/2007–08 ಓಬಿ:162/07–08 ದಿನಾಂಕ:28–12–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15–04–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)18/2008–09, ದಿನಾಂಕ:26–06–2008.

**ಪ್ರಸ್ತಾವನೆ:**

ಶ್ರೀ ಎಚ್.ಬಿ. ಮುದ್ದುರಾಜು, ಸಿ.ಪಿ.ಸಿ.–130, ಇವರು ಚಿಕ್ಕನಾಯಕನಹಳ್ಳಿ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

1. ನಿಮ್ಮನ್ನು ಈ ಕಛೇರಿಯ ಆದೇಶ ಸಂಖ್ಯೆ: ಸಿಬ್ಬಂದಿ(1)02/2005–06 ಓಬಿ ಸಂಖ್ಯೆ: 386 ದಿ: 09–03–2006ರಲ್ಲಿ ಸಾರ್ವಜನಿಕ ಹಿತದೃಷ್ಟಿ ಯಿಂದ ತಿಪಟೂರು ನಗರ ಠಾಣೆಯಿಂದ ಮಧುಗಿರಿ ಪೊಲೀಸ್

ಠಾಣೆಗೆ ವರ್ಗಾವಣೆ ಮಾಡಲಾಗಿರುತ್ತದೆ. ನೀವು ರಜೆ ಮೇಲೆ ಇದ್ದುದರಿಂದ ದಿ:12–03–2006 ರಂದು ತಿಪಟೂರು ನಗರ ಪೊಲೀಸ್ ಠಾಣಾ ದಿನಚರಿಯಲ್ಲಿ 21–30 ಗಂಟೆಗೆ ಪಿ.ಎಸ್.ಐ. ತಿಪಟೂರು ನಗರ ಠಾಣೆ ರವರು ನಿಮ್ಮನ್ನು ಕರ್ತವ್ಯದಿಂದ ಬಿಡುಗಡೆ ಮಾಡಿ, ರಹದಾರಿ ಮತ್ತು ಸಿ.ಎಲ್.ಎಕ್ಸ್ಟ್ರಾಕ್ಟ್ ಮುಂತಾದವುಗಳನ್ನು ಮುದ್ದಾಂ ಮಧುಗಿರಿ ಪೊಲೀಸ್ ಠಾಣೆಗೆ ಕಳುಹಿಸಿಕೊಟ್ಟಿರುತ್ತಾರೆ.

2. ನಂತರ ನೀವು 22–03–2006 ರಂದು ಸಾಯಂಕಾಲ ಮಧುಗಿರಿ ಠಾಣೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದು, ಆನಂತರ ದಿನಾಂಕ: 24–03–2006 ರಿಂದ ಕರ್ತವ್ಯಕ್ಕೆ ಹಾಜರಾಗದೇ ಗೈರುಹಾಜರಾಗಿರುತ್ತೀರಿ.
3. ನೀವು ದಿ:05–04–2006 ರಂದು ನಿಮಗೆ ಆರೋಗ್ಯ ಸರಿ ಇಲ್ಲ ಎಂಬುದಾಗಿ, ಕರ್ತವ್ಯಕ್ಕೆ ಬರಲು ಸಾಧ್ಯವಿಲ್ಲವೆಂದು ನಿಮ್ಮ ಬಾಬ್ತು ಎಮ್.ಹೆಚ್.ಎಸ್. ಪುಸ್ತಕವನ್ನು ಅಂಚೆ ಮೂಲಕ ಕಳುಹಿಸಿಕೊಡಲು ಕೋರಿದ್ದರಿಂದ ಪಿಸಿ–821 ವಸಂತಕುಮಾರ್ ಎಂಬುವರೊಂದಿಗೆ ಎಂ.ಹೆಚ್.ಎಸ್. ಪುಸ್ತಕವನ್ನು ಖುದ್ದಾಗಿ ಕಳುಹಿಸಿದ್ದು ಸರ್ಕಾರಿ ಆಸ್ಪತ್ರೆ ತಿಪಟೂರಿನಲ್ಲಿ ವಿಚಾರಿಸಲಾಗಿ ನೀವು ಸಿಕ್ಕಿರುವುದಿಲ್ಲ. ನೀವು ವಾಸಿಸುತ್ತಿದ್ದ ಪೊಲೀಸ್ ವಸತಿ ಗೃಹ ಬಳಿ ವಿಚಾರಿಸಿದಾಗಲೂ ಸಹ ಸಿಕ್ಕಿರುವುದಿಲ್ಲ.
4. ಈ ಬಗ್ಗೆ ಜಿಲ್ಲಾ ಪೊಲೀಸ್ ಕಛೇರಿ ತುಮಕೂರಿನಿಂದ ಸಿಬ್ಬಂದಿ(2)530/05–06 ದಿ:29–04–2006ರ ಆದೇಶದಂತೆ ನಿಮಗೆ ಕರ್ತವ್ಯ ತ್ಯಜಿಸಿದ ನೋಟೀಸ್ ನೀಡಿ ಜಾರಿ ಮಾಡಲು ಸಿಬ್ಬಂದಿಯವರನ್ನು ಕಳುಹಿಸಿದಾಗ ನಿಮ್ಮ ಪೊಲೀಸ್ ವಸತಿಗೃಹಕ್ಕೆ ಬೀಗ ಹಾಕಿದ್ದು, ಅಲ್ಲಿ ವಿಚಾರಿಸಲಾಗಿ ನೀವು ಒಂದು ವಾರದ ಹಿಂದೆ ಮನೆಗೆ ಬೀಗ ಹಾಕಿಕೊಂಡು ಶಿವಮೊಗ್ಗಕ್ಕೆ ಹೋಗಿರುವ ಬಗ್ಗೆ ತಿಳಿದು ಬಂದಿರುತ್ತದೆ.
5. ನಂತರ ದಿ:15–05–2006 ರಂದು ಈ ಕಛೇರಿಯ ಸಿಬ್ಬಂದಿ(1)71/2006 ಓಬಿ: 59/2006 ದಿ: 15–05–2006ರಲ್ಲಿ ನಿಮ್ಮನ್ನು ಮಧುಗಿರಿ ಠಾಣೆಯಿಂದ ಚಿ.ನಾ.ಹಳ್ಳಿ ಪೊಲೀಸ್ ಠಾಣೆಗೆ ವರ್ಗಾವಣೆ ಮಾಡಲಾಗಿದ್ದು, ನೀವು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದ ಪ್ರಯುಕ್ತ ನಿಮ್ಮ ರಹದಾರಿಯನ್ನು ದಿ:29–05–2006 ರಂದು ಚಿ.ನಾ.ಹಳ್ಳಿ ಪೊಲೀಸ್ ಠಾಣೆಗೆ ಕಳುಹಿಸಲಾಗಿರುತ್ತದೆ. ಆ ಬಗ್ಗೆ ಠಾಣಾ ದಿನಚರಿಯಲ್ಲಿ ನಮೂದಿಸಲಾಗಿದೆ.
6. ನಂತರ ಈ ಕಛೇರಿಯ ಆದೇಶ ಸಂಖ್ಯೆ: ಸಿಬ್ಬಂದಿ(1)71/2006 ಓಬಿ ಸಂಖ್ಯೆ:71/2006 ದಿ:31–05–2006 ರಲ್ಲಿ ನಿಮ್ಮನ್ನು ಚಿ.ನಾ.ಹಳ್ಳಿ ಪೊಲೀಸ್ ಠಾಣೆಯಿಂದ ತಿಪಟೂರು ನಗರ ಠಾಣೆಗೆ ವರ್ಗಾವಣೆ ಮಾಡಲಾಗಿದ್ದು ನಂತರ ಆದೇಶ ಸಂಖ್ಯೆ: ಸಿಬ್ಬಂದಿ(1)71/2006 ದ ಓಬಿ ಸಂಖ್ಯೆ:111/2006 ದಿ:06–06–2006ರಲ್ಲಿ ಮೇಲಿನ ಆದೇಶದಲ್ಲಿ ಚಿ.ನಾ.ಹಳ್ಳಿ ಪೊಲೀಸ್ ಠಾಣೆಯಿಂದ ತಿಪಟೂರು ನಗರ ಠಾಣೆಗೆ ವರ್ಗಾವಣೆ ಮಾಡಲಾಗಿದ್ದ ಆದೇಶವನ್ನು ರದ್ದುಪಡಿಸಲಾಗಿದೆ.
7. ನಂತರ ಈ ಕಛೇರಿಯ ಆದೇಶ ಸಂಖ್ಯೆ: ಸಿಬ್ಬಂದಿ(1)101/2006–07 ದಿ: 19–08–2006ರ ಕೆ.ಎ.ಟಿ.ಅರ್ಜಿ ಸಂಖ್ಯೆ:5092/2006ರಲ್ಲಿ ದಿ: 02–08–2006 ರಂದು ನೀಡಿದ ತೀರ್ಪನ್ನು ಉಲ್ಲೇಖಿಸಿ ಸಾರ್ವಜನಿಕ ಹಿತದೃಷ್ಟಿಯಿಂದ ನಿಮ್ಮನ್ನು ತಿಪಟೂರು ನಗರ ಠಾಣೆಯಲ್ಲಿ ಮುಂದುವರೆಸಲು ಸೂಕ್ತವಲ್ಲವೆಂದು ಮನವರಿಕೆಯಾದ ಕಾರಣ ತಿಪಟೂರು ನಗರ ಠಾಣೆಗೆ ಆದ ವರ್ಗಾವಣೆಯನ್ನು ರದ್ದುಗೊಳಿಸಲಾಗಿರುತ್ತದೆ ಎಂದು ನಿಮಗೆ ಹಿಂಬರಹವನ್ನು ನೀಡಲಾಗಿರುತ್ತದೆ.
8. ನೀವು ದಿ:24–03–2006 ರಿಂದ ದಿ:28–11–2006 ರವರೆಗೆ ಒಟ್ಟು 252 ದಿನಗಳು ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಮೇಲಾಧಿಕಾರಿಗಳ ಆದೇಶವನ್ನು ಪದೇ ಪದೇ ಉಲ್ಲಂಘಿಸಿ ನಿಮ್ಮ ದುರ್ನಡತೆ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 26–06–2007ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮೂರು ವರ್ಷಗಳ ಕಾಲ ಮುಂದೂಡಿ ಅವರು ಕರ್ತವ್ಯಕ್ಕೆ ಗೈರುಹಾಜರಾದ ಅವಧಿ ದಿನಾಂಕ: 24–03–2006 ರಿಂದ 28–11–2006ರ ವರೆಗಿನ ಅವಧಿಯನ್ನು ಸಂಬಳರಹಿತ ರಜೆಯನ್ನಾಗಿ ಪರಿಗಣಿಸಿ" ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಶೀಲಿಸಿ ಶಿಸ್ತು ಪ್ರಾಧಿಕಾರವು

ವಿಧಿಸಿದ ದಂಡನೆಯು ಸಮಂಜಸವಾಗಿರುವುದಾಗಿ ಅಭಿಪ್ರಾಯಪಟ್ಟು, ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 28–12–2007ರಲ್ಲಿ ಆದೇಶದಲ್ಲಿ ತಿರಸ್ಕರಿಸಿದ್ದಾರೆ.

ಈ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿದಾರು ಅನಧಿಕೃತವಾಗಿ ಗೈರುಹಾಜರಾಗಿರುವುದು ಸಾಬೀತಾಗಿದ್ದು ಪರಿಷ್ಕರಣ ಮೇಲ್ಮನವಿಯನ್ನು ಪರಿಗಣಿಸುವಂತಹ ಸಮರ್ಥನೆ ಇಲ್ಲದ ಕಾರಣ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಪರಿಷ್ಕರಣ ಮೇಲ್ಮನವಿದಾರರಿಗೆ ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 257 ಪೊಸಿಅ 2008 ಬೆಂಗಳೂರು, ದಿನಾಂಕ: 01ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್.ಬಿ. ಮುದ್ದುರಾಜು, ಸಿ.ಪಿ.ಸಿ.–130, ಚಿಕ್ಕನಾಯಕನಹಳ್ಳಿ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.290

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಲೋಕೇಶ್, ಎಚ್.ಸಿ.–1994, ಜೆ.ಜೆ.ನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪಶ್ಚಿಮ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: ಡಿಇ 6/ಆರ್6/ಡಿಸಿಪಿ:ಪ:02–03 ದಿನಾಂಕ:20–05–2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, (ಆಡಳಿತ) ಸಿ.ಎ.ಆರ್. ಬೆಂಗಳೂರು, ಇವರ ಆದೇಶ ಸಂಖ್ಯೆ: 49/ಅಪೀಲು/03–04 ದಿನಾಂಕ:26–05–2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06–11–2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)66/2004, ದಿನಾಂಕ:21–06–2005.

**ಪ್ರಸ್ತಾವನೆ:**

ಶ್ರೀ ಲೋಕೇಶ್, ಎಚ್.ಸಿ.–1994, ಜೆ.ಜೆ.ನಗರ ಪೊಲೀಸ್ ಠಾಣೆ, ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆಗೆ 8ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಪಿ.ಸಿ.–2963 ಮರಿಮಾದಯ್ಯ, ಪಿ.ಸಿ.–2986 ನಾಗರಾಜು, ಕೆಂಗೇರಿ ಪೊಲೀಸ್ ಠಾಣೆ, ಬ್ಯಾಟರಾಯನಪುರ ಹೊಯ್ಸಳ–9ರ ಎಚ್.ಸಿ.–1994 ಲೋಕೇಶ ಮತ್ತು ಬಸವೇಶ್ವರನಗರ ಪೊಲೀಸ್ ಠಾಣೆಯ ಪಿಸಿ–6615 ಬಿ.ಎಂ. ತಿಮ್ಮೇಗೌಡ ಆದ ನೀವುಗಳು ದಿ:21–04–2002 ರಂದು ರಾತ್ರಿ 9–30 ಗಂಟೆಯ ಸಮಯದಲ್ಲಿ ಬ್ಯಾಟರಾಯನಪುರ ಪೊಲೀಸ್ ಠಾಣಾ ಸರಹದ್ದಿನ ರಾಜರಾಜೇಶ್ವರಿ ದೇವಸ್ಥಾನದ ಜಾತ್ರೆಯಲ್ಲಿ ಮೊಬೈಲ್ ಆರ್ಕೆಸ್ಟ್ರಾ ಮುಂದೆ ಡ್ಯಾನ್ಸ್ ಮಾಡುತ್ತಿದ್ದ ಅಮಾಯಕ ನಾಗರಾಜು ಎಂಬುವನ ಮೇಲೆ ವಿನಾಕಾರಣ ಲಾಠಿಗಳಿಂದ ಕೈಕಾಲು ಮತ್ತು ಬೆನ್ನಿನ ಮೇಲೆ ಹೊಡೆದು ಗಾಯಗೊಳಿಸಿರುತ್ತೀರಿ. ಈ ಸಂಬಂಧವಾಗಿ ಬ್ಯಾಟರಾಯನಪುರ ಪೊಲೀಸ್ ಠಾಣೆ ಮೊ.ನಂ.224/02 ಕಲಂ 324, 34 ಐಪಿಸಿ ರೀತ್ಯಾ ಪ್ರಕರಣ ದಾಖಲಾಗಿರುತ್ತೆ. ನಿಮ್ಮ ಕರ್ತವ್ಯದಲ್ಲಿನ ದುರ್ನಡತೆ ಹಾಗೂ ಅತೀವ ಅಶಿಸ್ತನ್ನು ತೋರಿಸಿರುತ್ತೀರಿ ಎಂದು ಸಹಾಯಕ ಪೊಲೀಸ್ ಕಮೀಷನರ್ ಕೆಂಗೇರಿಗೇಟ್‌ರವರ ಪ್ರಾಥಮಿಕ ಹಂತದ ವಿಚಾರಣೆಯಿಂದ ದೃಢಪಟ್ಟಿರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ವರದಿಯನ್ನಾಧರಿಸಿ ಶ್ರೀ ಲೋಕೇಶ್, ಎಚ್.ಸಿ. ಇವರ ವಿರುದ್ಧ ಅರೋಪ ಸಾಬೀತಾದ ಹಿನ್ನೆಲೆಯಲ್ಲಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪಶ್ಚಿಮ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ

ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:20–05–2003ರ ಆದೇಶದಲ್ಲಿ ಅರ್ಜಿದಾರರ "ಒಂದು ವೇತನ ಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ಮುಂಬಡ್ತಿಗೆ ಧಕ್ಕೆಯಾಗುವಂತೆ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ" ಆದೇಶಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಆಯುಕ್ತರು, (ಆಡಳಿತ) ಸಿ.ಎ.ಆರ್. ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 26–05–2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರ ವಿರುದ್ಧದ ಆರೋಪವು ಸಾಬೀತಾಗಿದೆ. ಮೇಲ್ಮನವಿಯಲ್ಲಿ ತಿಳಿಸದಿರುವ ಯಾವುದೇ ಹೊಸ ಸಮರ್ಥನೀಯ ಅಂಶಗಳನ್ನು ಪ್ರಸ್ತಾಪಿಸದೆ ಇದ್ದುದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 304 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಲೋಕೇಶ್, ಎಚ್.ಸಿ.–1994, ಜೆ.ಜೆ.ನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.298

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್. ಚಿಕ್ಕಸಿದ್ದಯ್ಯ, ಎ.ಎಸ್.ಐ., ತಿಲಕನಗರ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(5)14/2007–08, ದಿನಾಂಕ:02–05–2008.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18–07–2008.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(5)14/2007–08, ದಿನಾಂಕ:06–10–2008.

**ಪ್ರಸ್ತಾವನೆ:**

ಶ್ರೀ ಎಸ್. ಚಿಕ್ಕಸಿದ್ದಯ್ಯ, ಎ.ಎಸ್.ಐ., ತಿಲಕನಗರ, ಬೆಂಗಳೂರು ನಗರ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಈ ಹಿಂದೆ ಬೆಂಗಳೂರು ನಗರದ ಮಡಿವಾಳ ಪೊಲೀಸ್ ಠಾಣೆಯಲ್ಲಿ ಎಚ್.ಸಿ.ಆಗಿ ಠಾಣಾ ಬರಹಗಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರು ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಅಧಿಕಾರ ದುರುಪಯೋಗ, ಬೇಜವಾಬ್ದಾರಿತನ ಪ್ರದರ್ಶಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

"ಶ್ರೀ ಎಸ್. ಚಿಕ್ಕಸಿದ್ದಯ್ಯ, ಎ.ಎಸ್.ಐ., ಕಲಾಸಿಪಾಳ್ಯ ಪೊಲೀಸ್ ಠಾಣೆ, ಬೆಂಗಳೂರು ನಗರ, ಆದ ನೀವು ದಿ:22–09–2001 ರಿಂದ 10–04–2005ರ ವರೆಗೆ ಮಡಿವಾಳ ಪೊಲೀಸ್ ಠಾಣೆಯಲ್ಲಿ ಎಚ್.ಸಿ.–430 ಠಾಣಾ ಬರಹಗಾರರಾಗಿ ಕರ್ತವ್ಯ ನಿರ್ವಹಿಸಿದ್ದು, ದಿ:20–10–2002 ರಂದು ಪೊಲೀಸ್ ಕಮೀಷನರ್‌ರವರ ಕಛೇರಿಯಿಂದ ಪಾಸ್‌ಪೋರ್ಟ್ ವೆರಿಫಿಕೇಷನ್ ಬಗ್ಗೆ ಪಾಸ್‌ಪೋರ್ಟ್ ಅರ್ಜಿ ಸಂ:ಎಂ.ವಿ.5664/02–ಎ–27405/02 ಇದನ್ನು ಪಡೆದು ಮಡಿವಾಳ ಪೊಲೀಸ್ ಠಾಣೆಯ ದಾಖಲಾತಿಗಳಲ್ಲಿ ನಮೂದು ಮಾಡಿ, ಯಾವುದೋ ಆಮಿಷಕ್ಕೊಳಗಾಗಿ ಅರ್ಜಿದಾರರಾದ ಇಮ್ರಾನ್ ಜಲಾಲ್ ರವರ ವಾಸದ ಮನೆಯನ್ನು

ನೋಡದೇ ಅವರ ನೆರೆಹೊರೆಯವರನ್ನು ಅರ್ಜಿದಾರರ ವಾಸದ ಬಗ್ಗೆ ವಿಚಾರಣೆ ಮಾಡಿ ಹೇಳಿಕೆಯನ್ನು ಪಡೆದುಕೊಳ್ಳದೇ, ಅವರು ಸಲ್ಲಿಸಿದ್ದ ದಾಖಲಾತಿಗಳ ನೈಜತೆಯನ್ನು ಪರೀಕ್ಷಿಸದೇ, ಅರ್ಜಿದಾರರನ್ನು ಠಾಣೆಯ ಪಿ.ಐ. ರವರ ಮುಂದೆ ಹಾಜರುಪಡಿಸಿ ಪಿ.ಐ. ರವರಿಗೆ ತಪ್ಪು ಮಾಹಿತಿ ನೀಡಿ ಅರ್ಜಿದಾರರ ಪಾಸ್‌ಪೋರ್ಟ್‌ಗೆ ಸಂಬಂಧಿಸಿದ ವೆರಿಫಿಕೇಷನ್ ವಿವರಗಳನ್ನು ನೀವೇ ಸ್ವತ: ತುಂಬಿ, ಪಿ.ಐ. ರವರಿಂದ ಸಹಿ ಪಡೆದು ಅರ್ಜಿದಾರರು ಅಕ್ರಮವಾಗಿ ಪಾಸ್‌ಪೋರ್ಟ್ ಪಡೆಯಲು ಅವಕಾಶ ಮಾಡಿಕೊಟ್ಟು ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷ್ಯತೆ, ಅಧಿಕಾರ ದುರುಪಯೋಗ, ಬೇಜವಾಬ್ದಾರಿತನವನ್ನು ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:02–05–2008ರ ಆದೇಶದಲ್ಲಿ "ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷ ಕಾಲ ಮುಂದೂಡುವ" ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪವು ಸಾಬೀತಾಗಿದ್ದು, ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 221 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್. ಚಿಕ್ಕಸಿದ್ದಯ್ಯ, ಎ.ಎಸ್.ಐ., ತಿಲಕನಗರ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ ಹಾಗೂ ಇವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.297

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ನೀಲಪ್ಪ ಸೂರಪ್ಪ ಪಾಯಣ್ಣಿ, ಪಿ.ಸಿ.–884, 2ನೇ ಪಡೆ, ಕೆ.ಎಸ್.ಆರ್.ಪಿ. ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 2ನೇ ಪಡೆ, ಕೆ.ಎಸ್.ಆರ್.ಪಿ. ಬೆಳಗಾವಿ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ 3:ಇವಿ:49/483:2003–04 ದಿನಾಂಕ:05–08–2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/13/2004–05 ದಿನಾಂಕ:14–12–2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:07–02–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)158/2006–07, ದಿನಾಂಕ:22–09–2008.

**ಪ್ರಸ್ತಾವನೆ:**

ಶ್ರೀ ನೀಲಪ್ಪ ಸೂರಪ್ಪ ಪಾಯಣ್ಣಿ, ಪಿ.ಸಿ.–884, 2ನೇ ಪಡೆ, ಕೆ.ಎಸ್.ಆರ್.ಪಿ. ಬೆಳಗಾವಿ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

1. ನೀವು ದಿ: 11–02–2003 ಇ–3 ತುಕಡಿಂ ಮಲ್ಲೆ ಹುಬ್ಬಳ್ಳಿನಗರ ಕರ್ತವ್ಯದಲ್ಲಿದ್ದಾಗ ಸಮವಸ್ತ್ರದಲ್ಲಿದ್ದುಕೊಂಡು ಸರಾಯಿಕುಡಿದು ಕರ್ತವ್ಯ ಬೇಜವಾಬ್ದಾರಿ ಹಾಗೂ ದುರ್ವರ್ತನೆ ಪ್ರದರ್ಶಿಸಿದ ಆರೋಪ.

2. ಸರಾಯಿ ಕುಡಿತದ ಅಮಲಿನಲ್ಲಿ ಕರ್ತವ್ಯ ಮೇಲಿದ್ದ ಪ್ಲಟೂನ್ ಕಮಾಂಡರ್ ಹವಲ್ದಾರ–33 ಕೆ.ಡಿ. ಪಾಟೀಲ ಇವರೊಂದಿಗೆ ಜಗಳ ತೆಗೆದು ಅವಾಚ್ಯ ಶಬ್ದಗಳಿಂದ ಪ್ಲಟೂನ ಸಿಬ್ಬಂದಿಗೆ ಬೈದದ್ದು ಅಲ್ಲದೆ ಶಿಸ್ತಿನ ಇಲಾಖೆಯಲ್ಲಿದ್ದು ಅಶಿಸ್ತಿನಿಂದ ಅಸಭ್ಯವಾಗಿ ವರ್ತಿಸಿದ ದುರ್ನಡತೆ ಆರೋಪ.
3. ಸರಾಯಿ ಕುಡಿತದ ಅಮಲಿನಲ್ಲಿ ಮೈಮೇಲೆ ಪ್ರಜ್ಞೆ ಇಟ್ಟುಕೊಳ್ಳದೇ ಸಾರ್ವಜನಿಕವಾಗಿ ಅಸಭ್ಯವಾಗಿ ಮಾತನಾಡಿ ಹಾಗೂ ಅಸಭ್ಯವಾಗಿ ವರ್ತಿಸಿ ಶಿಸ್ತಿನ ಇಲಾಖೆಯಲ್ಲಿದ್ದು ಶಿಸ್ತಿನ ಇಲಾಖೆಗೆ ತರವಲ್ಲದ ರೀತಿಯಲ್ಲಿ ಸಾರ್ವಜನಿಕವಾಗಿ ಪೊಲೀಸ್ ಇಲಾಖೆಗೆ ಕುಂದುಬರುವಂತೆ ವರ್ತಿಸಿ ದುರ್ನಡತೆ ಪ್ರದರ್ಶಿಸಿದ ಆರೋಪ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 2ನೇ ಪಡೆ, ಕೆ.ಎಸ್.ಆರ್.ಪಿ. ಬೆಳಗಾವಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 05–08–2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ, ದಿ:11–02–03 ರಿಂದ 30–06–2003ರ ವರೆಗಿನ ಅಮಾನತ್ತಿನ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸಿ ಆದೇಶಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:14–12–2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪವು ಸಾಬೀತಾಗಿದೆ, ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೆಯ ಅಂಶಗಳು ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 59 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನೀಲಪ್ಪ ಸೂರಪ್ಪ ಪಾಯಣ್ಣಿ, ಪಿ.ಸಿ.–88, 2ನೇ ಪಡೆ, ಕೆ.ಎಸ್.ಆರ್.ಪಿ. ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.323

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಟಿ.ಡಿ. ಜಯರಾಂ, ಪೊಲೀಸ್ ಇನ್ಸ್‌ಪೆಕ್ಟರ್, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ:ಸಿಬ್ಬಂದಿ/ 21/2007–08 ದಿನಾಂಕ:23–06–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8)69/2007–08 ದಿನಾಂಕ:11–02–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20–03–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)69/2007–08, ದಿನಾಂಕ:16–09–2008.

**ಪ್ರಸ್ತಾವನೆ:**

ಶ್ರೀ ಟಿ.ಡಿ. ಜಯರಾಂ, ಪೊಲೀಸ್ ಇನ್ಸ್‌ಪೆಕ್ಟರ್, ಇವರು ಶ್ರೀರಂಗಪಟ್ಟಣ ವೃತ್ತ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪ ಹಾಗೂ ನಿರ್ಲಕ್ಷ್ಯತೆಗಾಗಿ ಕರ್ನಾಟಕ

ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

"ಶ್ರೀ ಟಿ.ಡಿ. ಜಯರಾಂ ಆದ ನೀವು ದಿ:04–08–2003 ರಿಂದ ಶ್ರೀರಂಗಪಟ್ಟಣ ವೃತ್ತ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ. ದಿ:13–04–2007 ರಂದು ಲೋಕಪಾವನಿ ನದಿಯಲ್ಲಿ ಮರಳು ತೆಗೆಯುವ ವಿಚಾರದಲ್ಲಿ ದಲಿತ ಕೋಮಿನವರಿಗೂ ಹಾಗೂ ಇತರೆ ಕೋಮಿನವರಿಗೂ ಗಲಾಟೆ ನಡೆದಿರುತ್ತದೆ. ನಿಮ್ಮ ವೃತ್ತ ವ್ಯಾಪ್ತಿಯಲ್ಲಿ ಬರುವ ಕೆ.ಶೆಟ್ಟಹಳ್ಳಿ ಗ್ರಾಮದಲ್ಲಿ ಈ ಮೇಲೆ ಹೇಳಿರುವ ಎರಡು ಕೋಮಿನ ಜನಾಂಗದವರ ನಡುವಿನ ವಿವಾದದ ಬಗ್ಗೆ ನೀವು ಮುಂಜಾಗ್ರತೆ ಕ್ರಮವಾಗಿ ಮಾಹಿತಿ ಸಂಗ್ರಹಿಸಿ ಗ್ರಾಮದಲ್ಲಿ ಗಲಭೆ ಆಗದಂತೆ ತಡೆಯಲು ಕ್ರಮ ಜರುಗಿಸುವಲ್ಲಿ ನೀವು ವಿಫಲರಾಗಿರುತ್ತೀರಿ. ಹಾಗೂ ಸ್ಥಾಯಿ ಆದೇಶ ಸಂಖ್ಯೆ 920ರ ಪ್ರಕಾರ ಕ್ರಮವನ್ನು ತೆಗೆದುಕೊಂಡಿರುವುದಿಲ್ಲ ಎಂಬುದು ಅಪರ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಮಂಡ್ಯ, ಇವರ ವರದಿ ಸಂಖ್ಯೆ:ಅಡಿಷನಲ್ ಎಸ್.ಪಿ./ವರದಿ/33/2007 ದಿ:22–04–2007 ರಿಂದ ತಿಳಿದು ಬಂದಿರುತ್ತದೆ. ಈ ವರದಿಯಿಂದ ನೀವು ನಿಮ್ಮ ಕರ್ತವ್ಯದಲ್ಲಿ ಲೋಪವೆಸಗಿರುವುದು ಮತ್ತು ನಿರ್ಲಕ್ಷ್ಯತೆಯಿಂದ ವರ್ತಿಸಿರುವುದು ಎದ್ದು ಕಾಣುತ್ತದೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 23–06–2007ರ ಆದೇಶದಲ್ಲಿ "ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆಯನ್ನು" ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 11–02–2008ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಸಮರ್ಥನೀಯ ಕಾರಣಗಳು ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 324 ಪೊಸಿಅ 2008 ಬೆಂಗಳೂರು, ದಿನಾಂಕ 26ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ.ಡಿ. ಜಯರಾಂ, ಪೊಲೀಸ್ ಇನ್ಸ್‌ಪೆಕ್ಟರ್, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ ಹಾಗೂ ಇವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 322 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಎಂ. ಉಸ್ಮಾನ್, ಸಿ.ಪಿ.ಸಿ.–665, ಅಶೋಕನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಪಿಆರ್/98/2007, ಓ.ಬಿ.ಸಂ:823/2006–07, ದಿನಾಂಕ: 06–08–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಆದೇಶ ಸಂಖ್ಯೆ: ಅಪೀಲು/92/ಈವ/2007, ದಿನಾಂಕ: 08–12–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24–12–2007.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)121/2007–08, ದಿನಾಂಕ: 19–08–2008.

**ಪ್ರಸ್ತಾವನೆ:**

ಶ್ರೀ ಎಸ್.ಎಂ. ಉಸ್ಮಾನ್, ಸಿ.ಪಿ.ಸಿ.–665, ಅಶೋಕನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷರೋಪಣೆ:**

"ನೀವು ನಿಮ್ಮ ಠಾಣೆಯ ವ್ಯಾಪ್ತಿಯಲ್ಲಿ ದಿ:14–02–2007 ರಿಂದ 20–04–2007ರ ವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿ ಕರ್ತವ್ಯದಲ್ಲಿ ದುರ್ನಡತೆ ಹಾಗೂ ಅಶಿಸ್ತು ತೋರಿಸಿದ ಬಗ್ಗೆ"

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 06–08–2007ರ ಆದೇಶದಲ್ಲಿ **"ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಎರಡು ತಿಂಗಳುಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಿ ದಿ:14–02–2007 ರಿಂದ 20–04–2007ರ ವರೆಗಿನ ಗೈರುಹಾಜರಾದ ಅವಧಿಯನ್ನು ಸಂಬಳರಹಿತ ರಜೆ"** ಎಂದು ಪರಿಗಣಿಸಿ ಆದೇಶಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 08–12–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರು ಅನಧಿಕೃತವಾಗಿ ಗೈರುಹಾಜರಾಗಿರುವುದು ಸಾಬೀತಾಗಿದೆ. ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 158 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಂ. ಉಸ್ಮಾನ್, ಸಿ.ಪಿ.ಸಿ.–665, ಅಶೋಕನಗರ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.321

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ.ಡಿ. ಜಗದೀಶ್, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ತುಮಕೂರು, ಗ್ರಾಮಾಂತರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು (1)03/2006–07 ದಿನಾಂಕ:17–11–2008.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10–03–2008.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)1/2008–09, ದಿನಾಂಕ:14–08–2008.

**ಪ್ರಸ್ತಾವನೆ:**

ಶ್ರೀ ಸಿ.ಡಿ. ಜಗದೀಶ್, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಇವರು ತುಮಕೂರು ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಕರ್ತವ್ಯದಲ್ಲಿ

ಬೇಜವಾಬ್ದಾರಿತನ ಮತ್ತು ಕರ್ತವ್ಯಲೋಪವೆಸಗಿರುವ ಕಾರಣದ ಮೇಲೆ ಪೂರ್ವಭಾವಿ ತನಿಖೆ ನಡೆಸಿ ಅದರ ಆಧಾರದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

1. ತುಮಕೂರು ಗ್ರಾಮಾಂತರ ಪೊಲೀಸ್ ಠಾಣೆ ಮೊ.ಸಂ.66:2004 ಕಲಂ 498(ಎ) 307, 114 ಜೊತೆಗೆ 34 ಐಪಿಸಿ ಪ್ರಕರಣದಲ್ಲಿ ನೀವು ದಿ:22-04-2004 ರಂದು ಆಸ್ಪತ್ರೆಯಿಂದ ಬಂದ ಇಂಟಿಮೇಷನ್ ಸ್ಲಿಪ್ ಅನ್ನು ಸ್ವೀಕರಿಸಿ ದಿ:26-04-2004ರವರೆಗೂ ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡದೇ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಮತ್ತು ನಿರ್ಲಕ್ಷತೆ ತೋರಿಸಿರುತ್ತೀರಿ.
2. ದಿ:22-04-2004 ರಿಂದ 26-04-2004ರವರೆಗೂ ತುಮಕೂರು ಗ್ರಾಮಂತರ ಪೊಲೀಸ್ ಠಾಣೆ ಮೊ.ಸಂ. 66:2004 ಕಲಂ 498(ಎ) 307, 114 ಜೊತೆಗೆ 34 ಐಪಿಸಿ ಪ್ರಕರಣದಲ್ಲಿ ನೀವು ಪಂಚನಾಮೆ ಮಾಡಿರುವುದಿಲ್ಲ ಹಾಗೂ ಕೃತ್ಯಕ್ಕೆ ಬಳಸಿದ ವಸ್ತುಗಳನ್ನು ವಶಪಡಿಸಿಕೊಳ್ಳದೇ ಪ್ರಕರಣವನ್ನು ಮುಚ್ಚಿಹಾಕುವ ಪ್ರಯತ್ನ ಮಾಡಿ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಮತ್ತು ನಿರ್ಲಕ್ಷ್ಯತೆ ತೋರಿಸಿರುತ್ತೀರಿ.
3. ತುಮಕೂರು ಗ್ರಾಮಾಂತರ ಪೊಲೀಸ್ ಠಾಣೆ ಮೊ.ಸಂ.66:2004 ಕಲಂ 498(ಎ) 307, 114 ಜೊತೆಗೆ 34 ಐಪಿಸಿ ಪ್ರಕರಣದ ಬಗ್ಗೆ ನೀವು ದಿ:22-04-2004 ರಿಂದ 26-04-2004ರ ವರೆಗೂ ಯಾವುದೇ ಕ್ರಮ ಜರುಗಿಸದೇ ಮತ್ತು ಠಾಣಾ ದಿನಚರಿಯಲ್ಲೂ ಸಹಾ ನಮೂದು ಮಾಡದೇ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಮತ್ತು ನಿರ್ಲಕ್ಷ್ಯತೆ ತೋರಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿಲ್ಲವೆಂದು ವರದಿ ನೀಡಿದ್ದು, ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪದೆ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17-11-2008ರ ಆದೇಶದಲ್ಲಿ "ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ."

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರು ತಮ್ಮ ವಿರುದ್ಧದ ಆರೋಪಗಳನ್ನು ಅಲ್ಲಗೆಳೆಯುವ ಸಮರ್ಥನೀಯ ಅಂಶಗಳನ್ನು ನೀಡಿರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 136 ಪೊಸಿಅ 2008 ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಡಿ. ಜಗದೀಶ್, ಪೊಲೀಸ್ ಸಬ್-ಇನ್ಸ್‌ಪೆಕ್ಟರ್, ತುಮಕೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.363 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಅಸ್ಲಾಂಪಾಷ, ಪಿ.ಸಿ.-146, ಡಿ.ಎ.ಆರ್., ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ/01/2007-08 ಓಬಿ:305/07-08, ದಿನಾಂಕ:17-01-2008.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/ 63/2007-08 ದಿನಾಂಕ: 22-04-2008.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20–06–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)37/2007, ದಿನಾಂಕ:25–08–2008.

**ಪ್ರಸ್ತಾವನೆ:**

ಶ್ರೀ ಅಸ್ಲಾಂಪಾಷ, ಪಿ.ಸಿ.–146, ಡಿ.ಎ.ಆರ್., ಮೈಸೂರು, ಇವರು ಕ್ರಿಮಿನಲ್ ಮೊಕದ್ದಮೆಯೊಂದರಲ್ಲಿ ಭಾಗಿಯಾಗಿದ್ದರು ಎಂಬ ಕಾರಣಕ್ಕಾಗಿ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀ ಅಸ್ಲಾಂಪಾಷ, ಪಿ.ಸಿ.–146, ಡಿ.ಎ.ಆರ್., ಮೈಸೂರು, ರವರಾದ ನೀವು ದಿ:24/25–08–06 ರಂದು ರಾತ್ರಿ ತುಮಕೂರು ನಗರ ಕ್ಯಾತಸಂದ್ರ ಪೊಲೀಸ್ ಠಾಣಾ ಸರಹದ್ದಿ ನಲ್ಲಿರುವ ಶ್ರೀ ರಾಜ್ ಟಾಕೀಸ್ ಮುಂಭಾಗದ ಹಳೆಯ ರೈಲ್ವೆ ಬ್ರಿಡ್ಜ್ ಮೇಲೆ ಕ್ಯಾತಸಂದ್ರ ವಾಸಿ, ಶ್ರೀ ಮಸ್ತಾಕ್ ಅಹಮದ್, ರವರ ಮೇಲೆ ಮಾರಣಾಂತಿಕ ಹಲ್ಲೆ ಮಾಡಿ, ಕ್ಯಾತಸಂದ್ರ ಪೊಲೀಸ್ ಠಾಣೆ ಮೊ.ಸಂ: 237/07 ಕಲಂ 307 ಐ.ಪಿ.ಸಿ. ಪ್ರಕರಣದ ಆರೋಪಿಯಾಗಿರುವುದರ ಮೂಲಕ ದುರ್ನಡತೆ ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಅಂತಿಮ ವರದಿಯನ್ನು ಶಿಸ್ತು ಪ್ರಾಧಿಕಾರವು ಒಪ್ಪದೆ, ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 17–01–2008ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವೇತನ ಬಡ್ತಿಗಳಿಗೆ ಅಡ್ಡಿಯಾಗದಂತೆ ಆರು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ದಿ:09–12–06 ರಿಂದ 16–08–07ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಶಿಸ್ತುಪ್ರಾಧಿಕಾರಿಯವರ ನಿರ್ಣಯ ಸಮಂಜಸವಾಗಿದೆಯೆಂದು ಪರಿಗಣಿಸಿ, ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:22–04–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇಲ್ಲದಿರುವುದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 186 ಪೊಸಿಇ 2008 ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅಸ್ಲಾಂಪಾಷ, ಪಿ.ಸಿ.–146, ಡಿ.ಎ.ಆರ್., ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.361

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎನ್.ಎಚ್. ಗೌಡರ್, ಎ.ಎಸ್.ಐ., ಬಸವನಬಾಗೇವಾಡಿ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಡಿಇ/48/ಉವ/97–98, ದಿನಾಂಕ:21–05–2003.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು(6) 19/2003–04 ದಿನಾಂಕ:30–10–2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:09–03–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)20/2008–09, ದಿನಾಂಕ:28–08–2008.

**ಪ್ರಸ್ತಾವನೆ:**

ಶ್ರೀ ಎನ್.ಎಚ್. ಗೌಡರ್, ಎ.ಎಸ್.ಐ., ಇವರು ಬಸವನಬಾಗೇವಾಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರೊಂದಿಗೆ ಇತರೇ 7 ಅಧಿಕಾರಿ ಮತ್ತು ಸಿಬ್ಬಂದಿಗಳ ವಿರುದ್ಧ ಅತೀವ ದುರ್ನಡತೆ ಹಾಗೂ ಕರ್ತವ್ಯಚ್ಯುತಿ ಎಸಗಿದ ಹಿನ್ನೆಲೆಯಲ್ಲಿ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆ 8ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1. "ನೀವುಗಳು ಬಸವನಬಾಗೇವಾಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರತರಾದಾಗ ದಿ:27–05–98ರ ಮಧ್ಯಾಹ್ನ ಶ್ರೀ ಬಾಬು ಉರ್ಫ ಸುರೇಶ ಅಡದೊಡೆ ಈತನನ್ನು ಅನಧಿಕೃತವಾಗಿ ಠಾಣೆಗೆ ಕರೆತಂದು ಅಂದು ಮಧ್ಯಾಹ್ನ 12.00 ಗಂಟೆಯಿಂದ ದಿನಾಂಕ: 31–05–96ರ 00.30 ಗಂಟೆಯವರೆಗೆ ಬಾಗೇವಾಡಿ ಪೊಲೀಸ್ ಠಾಣೆಯ ಸಬಜೀಲದಲ್ಲಿ ಯಾವುದೇ ಪ್ರಕರಣ ದಾಖಲಿಸದೇ ಅಕ್ರಮ ಬಂಧನದಲ್ಲಿರಿಸಿ ಕರ್ತವ್ಯದಲ್ಲಿ ಅತೀವ ದುರ್ನಡತೆಯನ್ನು ಹಾಗೂ ಕರ್ತವ್ಯಚ್ಯುತಿ ಎಸಗಿರುವಿರಿ.
2. ಶ್ರೀ ಬಾಬು ಅದೋಡೆ ಈತನನ್ನು ಹಿಡಿದುಕೊಂಡು ಬರುವಾಗ ಅವನಿಗೆ ಹೊಡೆಬಡೆ ಮಾಡಿ ಅವನ ಹತ್ತಿರವಿದ್ದ ಹಣವನ್ನು ಕಿತ್ತುಕೊಂಡು ಮಾನಸಿಕ ಹಿಂಸೆಯನ್ನು ನೀಡಿ ನಿಮ್ಮ ಕರ್ತವ್ಯದಲ್ಲಿ ಅತೀ ದುರ್ನಡತೆಯನ್ನು ಪ್ರದರ್ಶಿಸಿರುವಿರಿ.
3. ಶ್ರೀ ಬಾಬು ಅದೋಡೆ, ಇವನ ಮೇಲೆ ದಿ: 31–05–96 ರಂದು ಸುಳ್ಳು ಕಾಗದಪತ್ರಗಳನ್ನು ತಯಾರಿಸಿ ಶ್ರೀ ಬಾಬು ಅದೋಡೆ, ಈತನನ್ನು ದಿ:30–05–96 ರಂದು ದಸ್ತಗೀರ ಮಾಡಿದ ಬಗ್ಗೆ ಖೈದಿಗಳ ಶೋಧನಾ ಪುಸ್ತಕದಲ್ಲಿ ನಮೂದಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆಯನ್ನು ಪ್ರದರ್ಶಿಸಿರುವಿರಿ.
4. ಶ್ರೀ ಬಾಬು ಅದೋಡೆ, ಈತನಿಗೆ ಪೊಲೀಸ್ ಠಾಣೆಯಲ್ಲಿ ಅಕ್ರಮ ಬಂಧನದಲ್ಲಿದ್ದಾಗ ಅವರ ಮೇಲೆ ಹಣವನ್ನು ಕಿತ್ತುಕೊಳ್ಳುವ ಉದ್ದೇಶದಿಂದ ದೌರ್ಜನ್ಯ ಎಸಗಿದ್ದುದರಿಂದ ಅವನು ದಿನಾಂಕ: 31–05–96 ರಂದು ಲಾಕಪ್ಪಿನಲ್ಲಿ ಮೃತಪಟ್ಟಿದ್ದು, ಇದನ್ನು ಮುಚ್ಚಿಹಾಕಲು ಹಾವು ಕಚ್ಚಿದ ಬಗ್ಗೆ ಸುಳ್ಳು ವದಂತಿಯನ್ನು ಹಬ್ಬಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 21–05–2003ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮೂರು ವರ್ಷಗಳ ಕಾಲ ಮುಂದೂಡಿ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವ ದಂಡನೆಯನ್ನು" ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 30–10–2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ ಅಲ್ಲದೇ ಪರಿಷ್ಕರಣ ಮೇಲ್ಮನವಿದಾರರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ ಹಾಗೂ

ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 342 ಪೊಸಿಅ 2008 ಬೆಂಗಳೂರು, ದಿನಾಂಕ: 2ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್.ಎಚ್. ಗೌಡರ್, ಎ.ಎಸ್.ಐ., ಬಸವನಬಾಗೇವಾಡಿ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.360

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಿ. ನಾರಾಯಣ, ಪಿ.ಎಸ್.ಐ. ರಾಯಲಪಾಡು ಪೊಲೀಸ್ ಠಾಣೆ, ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಪಸ್ಸಿ.ಡಿಇ:33: 98–99, ಓ.ಬಿ:192: 2001–02 ದಿನಾಂಕ:24–01–02.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:17–03–2005.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಪಸ್ಸಿ.ಡಿಇ:33:98–99, ದಿನಾಂಕ: 23–06–2007.

**ಪ್ರಸ್ತಾವನೆ:**

ಶ್ರೀ ಜಿ. ನಾರಾಯಣ, ಪಿ.ಎಸ್.ಐ. ಶ್ರೀನಿವಾಸಪುರ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಲೋಪ, ಅಧಿಕಾರ ದುರುಪಯೋಗ, ಲಂಚಗುಳಿತನ ಎಸಗಿರುವ ಆರೋಪದ ಮೇಲೆ ಇವರು ಮತ್ತು ಇನ್ನೊಬ್ಬರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 & 8ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿತ್ತು.

**ದೋಷರೋಪಣೆ:**

"ಶ್ರೀನಿವಾಸಪುರ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 5:99ರಲ್ಲಿ ದಿ: 07–01–1999 ರಂದು ಘಟನೆ ಸಂಭವಿಸಿದ್ದು, ಆ ಘಟನೆಗೆ ಸಂಬಂಧಪಟ್ಟ ಫಿರ್ಯಾದುದಾರರಾದ ಶ್ರೀಮತಿ ವೆಂಕಟಲಕ್ಷ್ಮಮ್ಮ, ಕಾನಗಮಾನಪನಹಳ್ಳಿ, ರೋಣೂರು ಹೋಬಳಿ, ಶ್ರೀನಿವಾಸಪುರ ತಾಲ್ಲೂಕು ರವರು ರಕ್ಷಣೆ ಕೊಡಲು ಕೋರಿದ್ದಕ್ಕೆ ಶ್ರೀನಿವಾಸಪುರ ಪೊಲೀಸ್ ಠಾಣೆಯ ಶ್ರೀ ಜಿ. ನಾರಾಯಣ, ಪಿ.ಎಸ್.ಐ. ಮತ್ತು ಶ್ರೀ ಪಿ. ನಾರಾಯಣಪ್ಪ, ಪಿ.ಸಿ.–519, ರೈಟರ್, ಇವರುಗಳು ಮೇಲ್ಕಂಡ ಫಿರ್ಯಾಧಿದಾರರಿಂದ ರಕ್ಷಣೆ ಕೊಡಲು 5,000/– ರೂ. ಲಂಚ ಕೊಡಲೇಬೇಕೆಂದು ಒತ್ತಾಯಿಸಿದ್ದು, ರೂ.1,200ಕ್ಕೆ ಇತ್ಯರ್ಥ ಮಾಡಿಕೊಂಡಿರುತ್ತಾರೆ.

ಫಿರ್ಯಾಧಿದಾರರಾದ ಶ್ರೀಮತಿ ವೆಂಕಟಲಕ್ಷ್ಮಮ್ಮ ಹಾಗೂ ಅವರ ಮೈದುನಾ ಶ್ರೀ ಎಂ. ಚನ್ನರಾಯಪ್ಪ, ರವರು ಹಣ ಕೊಡಲು ಇಷ್ಟವಿಲ್ಲದ ಕಾರಣ ಕೋಲಾರ ಲೋಕಾಯುಕ್ತಕ್ಕೆ ದಿ:11–01–1999 ರಂದು ದೂರು ನೀಡಿ ಆ ದೂರಿನ ಪ್ರಕಾರ ಶ್ರೀ ಜಿ. ನಾರಾಯಣ, ಪಿ.ಎಸ್.ಐ. ಮತ್ತು ಶ್ರೀ ಪಿ. ನಾರಾಯಣಪ್ಪ, ಪಿ.ಸಿ.–519, ರೈಟರ್, ಇವರುಗಳ ವಿರುದ್ಧ ಕೋಲಾರ ಲೋಕಾಯುಕ್ತ ಕಛೇರಿಯ ಮೊಕದ್ದಮೆ ಸಂಖ್ಯೆ: 1:99 ಕಲಂ 7,13(1) (ಡಿ) ಜೊತೆಗೆ 13(2) ಪಿ.ಸಿ.ಆಕ್ಟ್ 1988ರ ಪ್ರಕಾರ ಕೇಸ್ ದಾಖಲಾಗಿದ್ದು, ಅದರ ಅನ್ವಯ ಶ್ರೀನಿವಾಸಪುರ ಠಾಣೆಯ ಶ್ರೀ ಜಿ. ನಾರಾಯಣ, ಪಿ.ಎಸ್.ಐ. ಮತ್ತು ಶ್ರೀ ಪಿ. ನಾರಾಯಣಪ್ಪ, ಪಿ.ಸಿ.–519, ಇವರುಗಳು ಲಂಚ ಪಡೆಯುವಾಗ ಲೋಕಾಯುಕ್ತರವರು ದಾಳಿ ನಡೆಸಿ 1,200/– ರೂ.ಗಳನ್ನು ಅಮಾನತ್ತು ಪಡಿಸಿಕೊಂಡಿರುತ್ತಾರೆ. ಆದ್ದರಿಂದ ಶ್ರೀ ಜಿ. ನಾರಾಯಣ, ಪಿ.ಎಸ್.ಐ. ಮತ್ತು ಶ್ರೀ ಪಿ. ನಾರಾಯಣಪ್ಪ, ಪಿ.ಸಿ.–519, ರೈಟರ್, ಇವರುಗಳು ಕರ್ತವ್ಯದ ದುರುಪಯೋಗ, ಕರ್ತವ್ಯಲೋಪ, ಅಧಿಕಾರ ದುರುಪಯೋಗ, ಲಂಚಗುಳಿತನ ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:

24–01–02ರ ಆದೇಶದಲ್ಲಿ ಅರ್ಜಿದಾರರರಿಗೆ ಪೊಲೀಸ್ ಸಬ್–ಇನ್ಸ್‌ಪೆಕ್ಟರ್ ಹುದ್ದೆಯ ಕನಿಷ್ಠ ಮಟ್ಟಕ್ಕೆ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಎರಡು ವರ್ಷಗಳ ಕಾಲ ಇಳಿಸಲಾಗಿದೆ ಹಾಗೂ ನಂತರ ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಸಂಪಾದಿಸತಕ್ಕದ್ದು ಹಾಗೂ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರ ವಿರುದ್ಧದ ಆರೋಪವು ಸಾಬೀತಾಗಿರುತ್ತದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಸಮರ್ಥನೀಯ ಅಂಶಗಳಿರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 249 ಪೊಸಿಅ 2007 ಬೆಂಗಳೂರು, ದಿನಾಂಕ: 1ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ನಾರಾಯಣ, ಪಿ.ಎಸ್.ಐ. ರಾಯಲಪಾಡು ಪೊಲೀಸ್ ಠಾಣೆ, ಕೋಲಾರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.359 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಚ್.ಎಂ. ಕಾಂತರಾಜು, ಪಿ.ಎಸ್.ಐ., ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ ಮೈಸೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ 21/2007–08 ದಿನಾಂಕ:23–06–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು(6)/61/2007–08 ಓ.ಬಿ:85/07–08 ದಿನಾಂಕ: 17–01–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:01–04–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)48/2008–09, ದಿನಾಂಕ:26–09–2008.

**ಪ್ರಸ್ತಾವನೆ:**

ಶ್ರೀ ಎಚ್.ಎಂ. ಕಾಂತರಾಜು, ಪಿ.ಎಸ್.ಐ., ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಇವರ ಕರ್ತವ್ಯಲೋಪ ಹಾಗೂ ನಿರ್ಲಕ್ಷತೆ ಕುರಿತಂತೆ ಡಿವೈ.ಎಸ್.ಪಿ., ಮಂಡ್ಯವಿಭಾಗ ಇವರಿಂದ ಪೂರ್ವಭಾವಿ ತನಿಖೆ ನಡೆಸಿ ಅದರ ಆಧಾರದ ಮೇಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷಾರೋಪಣೆ ಹೊರಿಸಲಾಗಿದೆ.

**ದೋಷರೋಪಣೆ:**

"ಶ್ರೀ ಹೆಚ್.ಎಂ. ಕಾಂತರಾಜು, ಆದ ನೀವು ದಿ:05–05–2006 ರಿಂದ ಶ್ರೀರಂಗಪಟ್ಟಣ ಪೊಲೀಸ್ ಠಾಣೆಯಲ್ಲಿ ಉಪನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ. ದಿ:13–04–2007 ರಂದು ಲೋಕಪಾವನಿ ನದಿಯಲ್ಲಿ ಮರಳು ತೆಗೆಯುವ ವಿಚಾರದಲ್ಲಿ ದಲಿತ ಕೋಮಿನವರಿಗೂ ಹಾಗೂ ಇತರೆ ಕೋಮಿನವರಿಗೂ ಗಲಾಟೆ ನಡೆದಿರುತ್ತದೆ. ನಿಮ್ಮ ಠಾಣಾ ವ್ಯಾಪ್ತಿಯಲ್ಲಿ ಬರುವ ಕೆ.ಶೆಟ್ಟಿಹಳ್ಳಿ ಗ್ರಾಮದಲ್ಲಿ ಈ ಮೇಲೆ ಹೇಳಿರುವ ಎರಡು ಕೋಮಿನ ಜನಾಂಗದವರ ನಡುವಿನ ವಿವಾದದ ಬಗ್ಗೆ ನೀವು ಮುಂಜಾಗ್ರತೆ ಕ್ರಮವಾಗಿ ಮಾಹಿತಿ ಸಂಗ್ರಹಿಸಿ ಗ್ರಾಮದಲ್ಲಿ ಗಲಭೆ ಆಗದಂತೆ ತಡೆಯಲು ಕ್ರಮ ಜರುಗಿಸುವಲ್ಲಿ ನೀವು ವಿಫಲರಾಗಿರುತ್ತೀರಿ. ಹಾಗೂ ಸ್ಥಾಯಿ ಆದೇಶ ಸಂಖ್ಯೆ: 920ರ ಪ್ರಕಾರ ಕ್ರಮವನ್ನು ತೆಗೆದು ಕೊಂಡಿರುವುದಿಲ್ಲ ಎಂಬುದು ಅಪರ ಪೊಲೀಸ್

ಅಧೀಕ್ಷಕರು, ಮಂಡ್ಯಜಿಲ್ಲೆ, ಮಂಡ್ಯ ಇವರ ವರದಿ ಸಂಖ್ಯೆ/ ಅಡಿಸನಲ್ ಎಸ್.ಪಿ/ವರದಿ/33/2007. ದಿ:22-04-2007 ರಿಂದ ತಿಳಿದು ಬಂದಿರುತ್ತದೆ. ಈ ವರದಿಯಿಂದ ನೀವು ನಿಮ್ಮ ಕರ್ತವ್ಯದಲ್ಲಿ ಲೋಪವೆಸಗಿರುವುದು ಮತ್ತು ನಿರ್ಲಕ್ಷತೆಯಿಂದ ವರ್ತಿಸಿರುವುದು ಎದ್ದು ಕಾಣುತ್ತದೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 23-06-2007ರ ಆದೇಶದಲ್ಲಿ "ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ತಡೆಹಿಡಿಯುವ ದಂಡನೆಯನ್ನು" ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿದಾರರಿಗೆ ವಿಧಿಸಿರುವ ದಂಡನೆಯು ಸಮಂಜಸವಾಗಿದೆ ಎಂದು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:17-01-2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರು ಪರಿಷ್ಕರಣ ಮೇಲ್ಮನವಿಯಲ್ಲಿ ಪುರಸ್ಕರಿಸುವಂತಹ ಯಾವುದೇ ಹೊಸ ಸಮರ್ಥನೀಯ ಕಾರಣಗಳನ್ನು ನೀಡಿರುವುದಿಲ್ಲ. ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 323 ಪೊಸಿಅ 2008 ಬೆಂಗಳೂರು, ದಿನಾಂಕ: 1ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಚ್.ಎಂ. ಕಾಂತರಾಜು, ಪಿ.ಎಸ್.ಐ., ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.358

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ.ಸಿ. ದಶರಥಮೂರ್ತಿ, ಪೊಲೀಸ್ ಇನ್ಸ್‌ಪೆಕ್ಟರ್, ತರೀಕೆರೆ ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ/ಇವಿ 3/2005-06 ಓ.ಬಿ.ಸಂ:137/ 06-07 ದಿನಾಂಕ: 11-09-06.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ (8)15/2007-08 ದಿನಾಂಕ: 31-08-2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18-01-2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)15/2007-08, ದಿನಾಂಕ:02-09-2008.

**ಪ್ರಸ್ತಾವನೆ:**

ಶ್ರೀ ಎಂ.ಸಿ. ದಶರಥಮೂರ್ತಿ, ಇವರು ಪೊಲೀಸ್ ಇನ್ಸ್‌ಪೆಕ್ಟರ್, ತರೀಕೆರೆ ಪೊಲೀಸ್ ವೃತ್ತದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅಧಿಕಾರ ದುರುಪಯೋಗ, ತೀವ್ರ ದುರ್ನಡತೆ, ಕರ್ತವ್ಯಲೋಪವೆಸಗಿದ ಆರೋಪದ ಮೇಲೆ ಇವರು ಮತ್ತು ಇತರೇ ಸಿಬ್ಬಂದಿಗಳ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 & 8ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿತ್ತು.

**ದೋಷರೋಪಣೆ:**

1. ಶ್ರೀ ಎಂ.ಸಿ. ದಶರಥಮೂರ್ತಿ, ಪೊಲೀಸ್ ನಿರೀಕ್ಷಕರು, ತರೀಕೆರೆ ಪೊಲೀಸ್ ಠಾಣೆ, ಆದ ನೀವು ಸದರಿ ಠಾಣೆಯ ಪ್ರಭಾರಾಧಿಕಾರಿಯಾಗಿದ್ದು ಕೊಂಡು ಗೌಪ್ಯವಾದ ವಿಷಯದ ಬಗ್ಗೆ ಠಾಣೆಯ ಎ.ಎಸ್.ಐ., ಶ್ರೀ. ದೇವರಾಜ್ ಸಿಪಿಸಿ–186, ಪಿ.ಸಿ.327, ಹಾಗೂ ಪಿ.ಸಿ.–386 ರವರುಗಳನ್ನು ಮುಂದಾಳತ್ವದಲ್ಲಿಟ್ಟುಕೊಂಡು ಕೆಲಸ ಕಾರ್ಯಗಳನ್ನು ಮಾಡಿಸುತ್ತಿರುವಿರಿ. ದಿ:07–01–05 ರಂದು 11–45 ಗಂಟೆಗೆ ಮೊದಲೇ ನಿಮ್ಮ ಆದೇಶದಂತೆ ತರೀಕೆರೆ ಠಾಣೆಯ ಅಪರಾಧ ವಿಭಾಗದ ಸಿಬ್ಬಂದಿಗಳು ಜೋಡಿಬೋಕಿಕೆರೆ ವಾಸಿ ಸಿದ್ದಪ್ಪ ಎಂಬ ಮುಗ್ಧ ರೈತಾಪಿಯೊಬ್ಬನನ್ನು ತರೀಕೆರೆ ಬಸ್ ನಿಲ್ದಾಣದ ಹತ್ತಿರದಿಂದ ಠಾಣೆಗೆ ಕರೆತಂದು ಆತನಿಗೆ ಬೆದರಿಕೆ ಒಡ್ಡಿ ತದನಂತರ ನಿಮ್ಮ ಆದೇಶದಂತೆ 07–01–05 ಎಂದು ರಾತ್ರಿ ಸುಮಾರು 24–00 ಗಂಟೆಗೆ ನಿಮಗೆ ಹಂಚಲಾದ ಇಲಾಖಾ ಜೀಪು ನಂ:ಕೆಎ–06ಜಿ–101 ರಲ್ಲಿ ಎ.ಎಸ್.ಐ. ಶ್ರೀ ದೇವರಾಜ್ ಮತ್ತು ಅಪರಾಧ ವಿಭಾಗದ ಸಿಬ್ಬಂದಿಗಳಾದ ಸಿಪಿಸಿ–186, 603, 604 ಮತ್ತು ಗುಪ್ತ ವಿಭಾಗದ ಸಿಪಿಸಿ–327, ಮತ್ತು ಕಂಪ್ಯೂಟರ್ ವಿಭಾಗದ ಸಿಪಿಸಿ–386, ರವರುಗಳು ಮೇಲ್ಕಂಡ ಸಿದ್ಧಪ್ಪನನ್ನು ಜೋಡಿ ಬೋಕಿಕೆರೆ ಗ್ರಾಮಕ್ಕೆ ಕರೆದೊಯ್ದು ಅಲ್ಲಿಂದ ಶ್ರೀ ಎಸ್. ಗಿರೀಶ್ ಹಾಗೂ ಜಿ.ಒ.ಮಂಜಪ್ಪ ಎಂಬವರನ್ನು ಕೂಡಾ ಜೀಪಿನಲ್ಲಿ 7/8–1–05ರ ರಾತ್ರಿ ಸುಮಾರು 1–30 ಗಂಟೆಗೆ ಠಾಣೆಗೆ ಕರೆತಂದು ಅವರೆಲ್ಲರನ್ನೂ ಠಾಣೆಯಲ್ಲಿ ಅಕ್ರಮ ಬಂಧನ ದಲ್ಲಿರಿಸಿದ್ದಲ್ಲದೆ ಮಂಜಪ್ಪ ಎಂಬವರಿಗೆ ಕಳ್ಳತನ ಮಾಡಿದ್ದನ್ನು ಒಪ್ಪಿಕೋ ಎಂದು ಹೇಳಿ ಹಿಂಸೆಗೆ ಒಳಪಡಿಸಲು ಕಾರಣಕರ್ತರಾಗಿ ಅಧಿಕಾರ ದುರುಪಯೋಗಪಡಿಸಿ ತೀವ್ರ ದುರ್ನಡತೆ ತೋರ್ಪಡಿಸಿರುವಿರಿ;

2. ಶ್ರೀ ಎಂ.ಸಿ. ದಶರಥಮೂರ್ತಿ, ಪೊಲೀಸ್ ನಿರೀಕ್ಷಕರು, ತರೀಕೆರೆ ಪೊಲೀಸ್ ಠಾಣೆ, ಆದ ನಿಮ್ಮ ಆದೇಶದಂತೆ ಠಾಣೆಗೆ ತಂದು ಅಕ್ರಮ ಬಂಧನದಲ್ಲಿರಿಸಿಕೊಂಡಿದ್ದ ಸಿದ್ಧಪ್ಪ, ಗಿರೀಶ ಮತ್ತು ಮಂಜಪ್ಪನವರಿಂದ ಯಾವುದೇ ಸೊತ್ತು ಸ್ವಾಧೀನ ಪಡಿಸಿಕೊಳ್ಳಲು ಸಾಧ್ಯವಾಗದೇ ಇದ್ದು, ನೀವು ದಿ:08–01–05 ರಂದು ಬೆಳಿಗ್ಗೆ ಸುಮಾರು 8–30 ಗಂಟೆಗೆ ಠಾಣೆಗೆ ಬಂದ ಗ್ರಾಮದ ಸಣ್ಣತಿಮ್ಮಪ್ಪ ಮತ್ತು ಇತರರಿಗೆ ಜೋರು ಮಾಡಿ ಗಿರೀಶ್ ಮತ್ತು ಸಿದ್ಧಪ್ಪರವರನ್ನು ಬಿಟ್ಟು ಕಳುಹಿಸಿರುವಿರಿ. ಆದರೆ ಮಂಜಪ್ಪನ ವಿರುದ್ಧ ಕಂಪ್ಲೈಂಟ್ ಇದೆ ಎಂದು ಹೇಳಿ ಆತನ ಅಕ್ರಮ ಬಂಧನವನ್ನು ದಿ:7/8–01–05 ರಂದು 01–30ಗಂಟೆಯಿಂದ ದಿನಾಂಕ: 8/9–01–05 ರಂದು 5–00 ಗಂಟೆಯವರೆಗೆ ಮುಂದುವರಿಸಿರುವಿರಿ. ಅಲ್ಲದೆ ಮಂಜಪ್ಪನಿಗೆ ಹಿಂಸೆ ನೀಡಿರುವುದನ್ನು ಮರೆಮಾಚುವ ಸಲುವಾಗಿ ರಜೆ ಮುಗಿಸಿ ದಿ:08–01–05ರಂದು ಕರ್ತವ್ಯಕ್ಕೆ ಹಾಜರಾದ ಎಚ್.ಸಿ. ಚೌಡಯ್ಯ ರವರಿಗೆ ಮಂಜಪ್ಪನನ್ನು ರಾತ್ರಿ ಅನುಮಾನಾಸ್ಪದವಾಗಿ ತಿರುಗಾಡುತ್ತಿದ್ದ ವ್ಯಕ್ತಿಯೆಂದು ಪರಿಗಣಿಸಲು ಮತ್ತು ಆತನನ್ನು ಎಚ್.ಸಿ.–02 ರವರು ಇತರೇ ಸಿಬ್ಬಂದಿಗಳೊಂದಿಗೆ ಗಸ್ತಿನಲ್ಲಿದ್ದಾಗ ಹಿಡಿದುಕೊಂಡು ಬಂದಂತೆ ನಮೂದಿಸಿ ಆತನ ಮೇಲೆ ಕಲಂ: 109 ಸಿಆರ್‌ಪಿಸಿ.ಯಂತೆ ಪ್ರಕರಣ ದಾಖಲಿಸಲು ಎಚ್.ಸಿ.–02 ರವರಿಗೆ ಹೇಳಿದಂತೆ ಸದರಿ ಎಚ್.ಸಿ. ರವರು ಮಂಜಪ್ಪನನ್ನು ದಿ:8/9–01–05 ರಂದು ರಾತ್ರಿ 3–30 ಗಂಟೆಗೆ ಗಸ್ತಿನಲ್ಲಿದ್ದಾಗ ಹಿಡಿದು 5–00 ಗಂಟೆಗೆ ದಸ್ತಗಿರಿ ಮಾಡಿದಂತೆ ತೋರಿಸಿ, ಆತನ ವಿರುದ್ಧ ತರೀಕೆರೆ ಠಾಣಾ ಮೊ.ನಂ.3/05 ಕಲಂ:109 ಸಿಆರ್‌ಪಿಸಿ ಯಂತೆ ಅಧೀನ ಸಿಬ್ಬಂದಿ ಮುಖೇನ ಸುಳ್ಳು ಪ್ರಕರಣ ದಾಖಲಿಸಿ ಕಾರಣಕರ್ತರಾಗಿ ಅಧಿಕಾರ ದುರುಪಯೋಗ ಮತ್ತು ತೀವ್ರ ದುರ್ನಡತೆ ತೋರ್ಪಡಿಸಿರುವಿರಿ.

3. ಶ್ರೀ ಎಂ.ಸಿ. ದಶರಥಮೂರ್ತಿ, ಪೊಲೀಸ್ ನಿರೀಕ್ಷಕರು, ತರೀಕೆರೆ ಪೊಲೀಸ್ ಠಾಣೆ, ಆದ ನಿಮ್ಮ ಆದೇಶದಂತೆ ಸಿಬ್ಬಂದಿಗಳು ಸಿದ್ಧಪ್ಪ, ಗಿರೀಶ ಹಾಗೂ ಮಂಜಪ್ಪರನ್ನು ಠಾಣೆಗೆ ಕರೆತಂದಿದ್ದ ಸಂದರ್ಭದಲ್ಲಿ ತರೀಕೆರೆ ಗುಜರಿ ಅಂಗಡಿಯ ಭಾಷಾ ಮತ್ತು ಜಾಫರ್ ಎಂಬುವವರನ್ನು ಕೂಡಾ ನಿಮ್ಮ ಆದೇಶದಂತೆ ಶ್ರೀ ದಾದಾಪೀರ್ ಸಿಪಿಸಿ–186, ಶ್ರೀ ವರ್ಗೀಸ್, ಸಿಪಿಸಿ–327 ರವರು ಠಾಣೆಗೆ ಕರೆತಂದು ಕಳವು ಕೇಸಿನ ಮಾಲುಗಳನ್ನು (ಡ್ರಿಪ್‌ವೈರ್) ಮೇಲ್ಕಂಡವರು ನಿಮ್ಮ ಅಂಗಡಿಗೆ ಕೊಟ್ಟಿರುವುದಾಗಿ ಹೇಳಿರುತ್ತಾರೆ, ನಿಮ್ಮನ್ನು ಕೂಡಾ ಪ್ರಕರಣದಲ್ಲಿ ಸಿಲುಕಿಸುವುದಾಗಿ ಬೆದರಿಸಿ ಅವರುಗಳನ್ನು ಬಿಡಿಸಲು ಮಧ್ಯಸ್ಥಿಕೆ ವಹಿಸಲು ಬಂದ ಮಹಮ್ಮದ್ದ ರಫೀಕ್‌ರವರಿಗೆ ಶ್ರೀ.ದಾದಾಪೀರ್ ಸಿಪಿಸಿ–186 ಮತ್ತು ಶ್ರೀ.ವರ್ಗೀಸ್, ಸಿಪಿಸಿ–327, ರವರು ನಿಮ್ಮ ಸೂಚನೆಯ ಮೇರೆಗೆ ರೂ:10,000/– ಸಾಹೇಬರಿಗೆ ಮತ್ತು ರೂ:7,000/–ನ್ನು ಸ್ಟಾಫ್‌ಗೆ ಕೊಡಬೇಕೆಂದು ಒತ್ತಾಯಿಸಿ ನಂತರ ರೂ:15,000/–ಕ್ಕೆ ವ್ಯವಹಾರ ಕುದಿರಿಸಿ ಶ್ರೀ ಭಾಷಾರವರಿಂದ ರೂ: 15,000/– ಅಕ್ರಮ ಸಂಭಾವನೆಯನ್ನು ನಿಮ್ಮ ಸೂಚನೆಯ ಮೇರೆಗೆ ಸ್ವೀಕರಿಸಿರುವರು. ಠಾಣೆಯ ಜವಾಬ್ದಾರಿಯುತ ಅಧಿಕಾರಿಯಾದ ನೀವು ಸಿಬ್ಬಂದಿಗಳ ಮುಖೇನ, ಅಕ್ರಮ ಸಂಭಾವನೆ ನೀಡುವಂತೆ ಒತ್ತಾಯಿಸಿ, ಸಿಬ್ಬಂದಿಗಳ ಮುಖೇನ ಅಕ್ರಮ ಸಂಭಾವನೆ ಸ್ವೀಕರಿಸಿ ಸರಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ತೀವ್ರ ದುರ್ನಡತೆ ತೋರ್ಪಡಿಸಿರುವಿರಿ.

4. ಶ್ರೀ ಎಂ.ಸಿ. ದಶರಥಮೂರ್ತಿ, ಪೊಲೀಸ್ ನಿರೀಕ್ಷಕರು, ತರೀಕೆರೆ ಪೊಲೀಸ್ ಠಾಣೆ, ಆದ ನಿಮ್ಮ ಸೂಚನೆಯ ಮೇರೆಗೆ ಶ್ರೀ ದಾದಾಪೀರ್ ಸಿಪಿಸಿ–186 ಮತ್ತು ಶ್ರೀ ವರ್ಗೀಸ್, ಸಿಪಿಸಿ–327, ರವರು ಗುಜರಿ ಅಂಗಡಿಯ ಜಾಫರ್‌ರವರಿಂದ 2 ಚೀಲ ಹಳೆಯ ಡ್ರಿಪ್‌ವೈರ್ ಪಡೆದು ಅವರನ್ನು ಠಾಣೆಯಿಂದ ಕಳುಹಿಸಿದ ನಂತರ ಪುನ: ಸಿಬ್ಬಂದಿಗಳ ಮುಖೇನ ಹೊಸ ಡ್ರಿಪ್‌ವೈರ್‌ಗಳನ್ನು ಕೊಡುವಂತೆ ಅವರಿಗೆ ಒತ್ತಾಯಿಸಿ ಐದು ಬಂಡಲ್ ಹೊಸ ಡ್ರಿಪ್‌ವೈರನ್ನು ಪಡೆದು ಒಂದು ಚೀಲ ಹಳೇ ವೈರನ್ನು ಹಿಂತಿರುಗಿಸಿರುವಿರಿ. ಮೇಲಿನಂತೆ ಕಾನೂನು ಬಾಹಿರವಾಗಿ ವಶಪಡಿಸಿಕೊಂಡ ಡ್ರಿಪ್‌ವೈರ್‌ಗಳನ್ನು ತರೀಕೆರೆ ಠಾಣೆಯ ಡಿಸೆಂಬರ್ 2004 ಮತ್ತು ಜನವರಿ 2005ನೇ ತಿಂಗಳ ಯಾವುದೇ ಪ್ರಕರಣದ ಅಥವಾ ಸೊತ್ತು ಪಟ್ಟಿಯಲ್ಲಿ ನಮೂದಿಸದೆ ಅದು ಠಾಣೆಯಿಂದ ಕಾಣೆಯಾಗಿದ್ದು ಅದರ ದುರುಪಯೋಗವಾಗಿ, ಸಾರ್ವಜನಿಕವಾಗಿ ಇಲಾಖಾ ಗೌರವಕ್ಕೆ ಕುಂದುಂಟಾಗಲು ಕಾರಣಕರ್ತರಾಗಿ ತೀವ್ರ ದುರ್ನಡತೆ ತೋರ್ಪಡಿಸಿರುವಿರಿ.

5. ಶ್ರೀ ಎಂ.ಸಿ. ದಶರಥಮೂರ್ತಿ, ಪೊಲೀಸ್ ನಿರೀಕ್ಷಕರು, ತರೀಕೆರೆ ಪೊಲೀಸ್ ಠಾಣೆ, ಆದ ನೀವು ಠಾಣಾ ಪ್ರಭಾರಾಧಿಕಾರಿಯಾಗಿ ಠಾಣೆಯ ಜವಾಬ್ದಾರಿಯುತ ಸ್ಥಾನದಲ್ಲಿದ್ದುಕೊಂಡು ಅಧೀನ ಅಧಿಕಾರಿ/ಸಿಬ್ಬಂದಿಗಳಿಗೆ ಮಾದರಿ ಹಾಗೂ ಮಾರ್ಗದರ್ಶಕರಾಗಿರ ಬೇಕಾದವರು ನಿರಪರಾಧಿ ಮಂಜಪ್ಪನ ಮೇಲೆ ಕಲಂ:109 ಸಿಆರ್‌ಪಿಸಿ ಯಂತೆ ಸುಳ್ಳು ಪ್ರಕರಣ ದಾಖಲಿಸುವಂತೆ ಮತ್ತು ನಿರಪರಾಧಿಗಳಿಂದ ಅಕ್ರಮ ಸಂಭಾವನೆ ಸ್ವೀಕರಿಸುವಂತೆ ಅಧೀನ ಸಿಬ್ಬಂದಿಗಳಿಗೆ ಪ್ರಚೋದಿಸಿ ಅವರನ್ನು ತಪ್ಪು ಮಾರ್ಗಕ್ಕೆಳೆದು ಅದರಲ್ಲಿ ಯಶಸ್ವಿಯಾಗಿ ಸರ್ಕಾರಿ ನೌಕರನಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿ ತೀವ್ರ ದುರ್ನಡತೆ ಹಾಗೂ ಕರ್ತವ್ಯಲೋಪ ಎಸಗಿರುವಿರಿ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು 5 ಆರೋಪಗಳಲ್ಲಿ (1) ಮತ್ತು (5) ಭಾಗಶ: ಸಾಬೀತಾಗಿರುವುದಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 11–09–06ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 31–08–2007ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇವರ ವಿರುದ್ಧದ ಆರೋಪಗಳು ಭಾಗಶ: ಸಾಬೀತಾಗಿದ್ದು, ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಸಮರ್ಥನೀಯವಾದ ಯಾವುದೇ ಹೊಸ ಅಂಶಗಳು ಇರುವುದಿಲ್ಲ. ಸಾಬೀತಾಗಿರುವ ಆರೋಪಕ್ಕೆ ದಂಡನೆಯ ಪ್ರಮಾಣವು ಸರಿಯೆಂದು ಕಂಡುಬರುವುದರಿಂದ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 357 ಪೊಸಿಅ 2008 ಬೆಂಗಳೂರು, ದಿನಾಂಕ: 5ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಸಿ. ದಶರಥಮೂರ್ತಿ, ಪೊಲೀಸ್ ಇನ್ಸ್‌ಪೆಕ್ಟರ್, ತರೀಕೆರೆ ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.357

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ನಂಜುಂಡೇಗೌಡ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಬಸವನಹಳ್ಳಿ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಡಿಇ 11/2006 ಓ.ಬಿ.ಸಂ:56/2007, ದಿನಾಂಕ:29–03–07.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ 2/ಮೇಲ್ಮನವಿ/10/ 2007 ದಿನಾಂಕ: 22–02–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:30–06–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)39/2008–09, ದಿನಾಂಕ:22–09–2008.

**ಪ್ರಸ್ತಾವನೆ:**

ಶ್ರೀ ನಂಜುಂಡೇಗೌಡ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಇವರು ಕೊಪ್ಪ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯ ವಿಮುಖತೆ ಹಾಗೂ ನಿರ್ಲಕ್ಷತೆಗಾಗಿ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿತ್ತು.

**ದೋಷರೋಪಣೆ:**

1. ಶ್ರೀಮತಿ ಯಶೋಧ, ಹಿರೇಕೆರೆ ವಾಸಿ ಇವರ ಮನೆಯಲ್ಲಿ ಎರಡು ಬಾರಿ ಕಳ್ಳತನವಾಗಿದ್ದು, ಒಮ್ಮೆ ಕೋಳಿ ಕಳ್ಳತನವಾಗಿ ಈ ಸಂಬಂಧ ಪ್ರಕರಣ ದಾಖಲಿಸದೇ ಇದ್ದ ಬಗ್ಗೆ.
2. ಕೊಪ್ಪ ಠಾಣಾ ಮೊ.ನಂ: 96/05 ಕಲಂ 504, 307, 324, 506, 34 ಐಪಿಸಿ ಪ್ರಕರಣದ ಆರೋಪಿ ರವೀಂದ್ರ ಆಸ್ಪತ್ರೆಯಲ್ಲಿ ದಾಖಲಾಗಿದ್ದು, ಆತನ ಬೆಂಗಾವಲಿಗೆ ಸಿಬ್ಬಂದಿ ನೇಮಿಸಲು ಮೇಲಾಧಿಕಾರಿಗಳು ತಿಳಿಸಿದರೂ ಸಹ ನೇಮಿಸದೆ, ಬಿಡುಗಡೆಯಾಗಿ ತಲೆಮರೆಸಿಕೊಳ್ಳಲು ಕಾರಣಕರ್ತರಾಗಿರುತ್ತೀರಿ, ಅಲ್ಲದೇ ಜಾಮೀನು ನಿರೀಕ್ಷಣೆಗೆ ಅರ್ಜಿ ಸಲ್ಲಿಸಲು ಅವಕಾಶ ಮಾಡಿಕೊಟ್ಟಿರುತ್ತೀರಿ.
3. ನಂಜುಂಡೇಗೌಡ, ಪಿ.ಎಸ್.ಐ. ಆದ ನಿಮಗೆ ವಲಯ ಕಛೇರಿಯಿಂದ ಕೊಪ್ಪ ಪೊಲೀಸ್ ಠಾಣೆಯಿಂದ ಬಸವನಹಳ್ಳಿ ಪೊಲೀಸ್ ಠಾಣೆಗೆ ವರ್ಗಾವಣೆಯಾಗಿದ್ದು, ನೀಡಲಾದ ಆದೇಶದಲ್ಲಿ ನಿಯೋಜಿಸಲಾದ ಸ್ಥಳದಲ್ಲಿ ಯಾವುದೇ ಸೇರುವಿಕೆ ಕಾಲವನ್ನು ಉಪಯೋಗಿಸಿಕೊಳ್ಳದೆ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳಲು ತಿಳಿಸಿದ್ದರೂ ದಿನಾಂಕ: 29–12–2005 ರಿಂದ ಅನಾರೋಗ್ಯ ಕಾರಣ ಎ.ಎಸ್.ಐ. ರವರಿಗೆ ಛಾರ್ಜ್ ವಹಿಸಿ ಯಾವುದೇ ಮಾಹಿತಿ ನೀಡದೇ ಹೋಗಿರುವ ಬಗ್ಗೆ.
4. ವಲಯ ಕಛೇರಿಯ ಆದೇಶದಲ್ಲಿ ಸಣ್ಣತಮ್ಮಯ್ಯಪ್ಪ ಒಡೆಯರ್, ಪಿ.ಎಸ್.ಐ. ರವರಿಗೆ ಪೂರ್ಣಪ್ರಭಾರೆ ವಹಿಸಿಕೊಡದೇ ನಿರ್ಲಕ್ಷ್ಯತೆ ತೋರಿರುವ ಬಗ್ಗೆ.
5. ದಿ:29–12–2005 ರಿಂದ ಹೊರಟು ಹೋದವರು ಇದುವರೆಗೂ ನಿಮ್ಮ ಇರುವಿಕೆಯ ಬಗ್ಗೆ ಯಾವುದೇ ಮಾಹಿತಿ ನೀಡದೇ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ನಿರ್ಲಕ್ಷತನ ತೋರಿರುವ ಬಗ್ಗೆ.
6. ಪ್ರಧಾನ ಕಛೇರಿಯ ಸುತ್ತೋಲೆಯಲ್ಲಿ ಹೊಸದಾಗಿ ವರ್ಗಾವಣೆ ಹೊಂದಿದಂತಹ ಅಧಿಕಾರಿಗಳು ಹೊಸದಾಗಿ ನಿಯೋಜಿಸಲಾದ ಸ್ಥಳದಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ರಜೆಯ ಮೇಲೆ ತೆರಳಬಾರದು ಎಂಬ ಆದೇಶ ಇದ್ದರೂ ಆದೇಶವನ್ನು ಉಲ್ಲಂಘನೆ ಮಾಡಿರುವ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿದ್ದು, ಇಲಾಖಾ ವಿಚಾರಣೆಯಲ್ಲಿ ಹೊರಿಸಲಾದ ಆರೋಪವು ಭಾಗಶ: ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 29–03–07ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ 6ತಿಂಗಳ ಕಾಲ ಮುಂದೂಡಿ, ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಹಕ್ಕಿನಲ್ಲಿರುವ ರಜೆಯೆಂದು ಹಾಗೂ ದಿ:29–12–2005 ರಿಂದ 04–02–2006 ರವರೆಗೆ ಅನಧಿಕೃತವಾಗಿ ಗೈರುಹಾಜರಾದ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆಯೆಂದು ಪರಿಗಣಿಸಿ ಆದೇಶಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22–02–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳು ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 196 ಪೊಸಿಅ 2008 ಬೆಂಗಳೂರು, ದಿನಾಂಕ: 5ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಂಜುಂಡೇಗೌಡ, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಬಸವನಹಳ್ಳಿ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.356

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ.ಸಿ. ಈರೇಗೌಡ, ಎ.ಎಚ್.ಸಿ.400, ಸಿ.ಎ.ಆರ್. (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಿ.ಎ.ಆರ್.(ಕೇಂದ್ರ) ಬೆಂಗಳೂರು, ಇವರ ಆದೇಶ ಸಂಖ್ಯೆ: ಶಿಕ್ಷೆ/25 ಡಿ.ಸಿ.ಪಿ., ಸಿ.ಎ.ಆರ್.ಕೇಂದ್ರ/2006 ದಿನಾಂಕ:20–04–06.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಸಿ.ಎ.ಆರ್. ಬೆಂಗಳೂರು ನಗರ, ಇವರ ಆದೇಶ ಸಂಖ್ಯೆ:21/ಅಪೀಲು–2/2006 ದಿನಾಂಕ:22–05–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27–12–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)118/2007–08, ದಿನಾಂಕ:14–08–2008.

**ಪ್ರಸ್ತಾವನೆ:**

ಶ್ರೀ ಎಂ.ಸಿ. ಈರೇಗೌಡ, ಎ.ಎಚ್.ಸಿ.400, ಸಿ.ಎ.ಆರ್.(ಕೇಂದ್ರ) ಬೆಂಗಳೂರು, ಇವರು ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ಆರೋಪದ ಮೇಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿತ್ತು.

**ದೋಷರೋಪಣೆ:**

"ನೀವು ದಿ:07–04–2005 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿಯಾಗಿದ್ದು, ಈ ಕಛೇರಿ ಆದೇಶ ಸಮಸಂಖ್ಯೆ ದಿ:05–05–2005ರಲ್ಲಿ ನಿಮ್ಮನ್ನು ಕರ್ತವ್ಯ ಪರಿತ್ಯಕ್ತನೆಂದು ಪರಿಗಣಿಸಲಾಗಿದ್ದು, ಸದರಿ ಆದೇಶವನ್ನು ನೀವು ದಿ:24–05–2005ರಂದು ಸ್ವೀಕರಿಸಿರುತ್ತೀರಿ. ನೀವು ದಿ:29–04–2005 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುವುದಾಗಿ ದಿ:14–06–2005 ರಂದು ವರದಿ ಸಲ್ಲಿಸಿ ಜಂಟಿ ಆಯುಕ್ತರಾದ ಶ್ರೀ.ಜೈಕರ್ ಜರೋಮ್ ಐ.ಎ.ಎಸ್.ರವರ ಜೊತೆಯಲ್ಲಿ ಪ್ರವಾಸದಲ್ಲಿದ್ದುದಾಗಿ ತಿಳಿಸಿ, ಸದರಿ ಕರ್ತವ್ಯದಿಂದ ಬಿಡುಗಡೆಯಾದ ಬಗ್ಗೆ ಆಯುಕ್ತರು, ಶ್ರೀ.ಜೈಕರ್ ಜರೋಮ್, ಐ.ಎ.ಎಸ್. ರವರ ಪತ್ರ ದಿ:07–05–2005ನ್ನು ಹಾಜರು ಪಡೆಸಿರುತ್ತೀರಿ. ಆದರೆ ಸದರಿ ಆಯುಕ್ತರ ಜೊತೆ ಪ್ರವಾಸ ಕೈಗೊಂಡ ಬಗ್ಗೆ ಯಾವುದೇ ಮಾಹಿತಿ ನೀಡದೆ ಹಾಗೂ ಪ್ರವಾಸದ ಬಗ್ಗೆ ಯಾವುದೇ ದಾಖಲೆ ನೀಡದೆ ಸುಳ್ಳು ಮಾಹಿತಿ ನೀಡಿ ಕರ್ತವ್ಯಲೋಪ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಸಿ.ಎ.ಆರ್. (ಕೇಂದ್ರ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 20–04–06ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ ಹಾಗೂ ದಿ:07–04–05 ರಿಂದ 28–04–2005ರ ವರೆಗೆ ಗೈರುಹಾಜರಾದ ಅವಧಿಯನ್ನು ಕೆ.ಸಿ.ಎಸ್.ಆರ್. 106(ಎ)ರ ಪ್ರಕಾರ ಸಂಬಳರಹಿತ ರಜೆಯೆಂದು" ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್, ಸಿ.ಎ.ಆರ್. ಬೆಂಗಳೂರು ನಗರ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 22–05–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರು ಅನಧಿಕೃತವಾಗಿ ಗೈರು ಹಾಜರಾಗಿರುವುದು ದೃಢಪಟ್ಟಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 277 ಪೊಸಿಅ 2008 ಬೆಂಗಳೂರು, ದಿನಾಂಕ: 5ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಸಿ. ಈರೇಗೌಡ, ಎ.ಎಚ್.ಸಿ. 400, ಸಿ.ಎ.ಆರ್. (ಕೇಂದ್ರ) ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 354

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ನರಸಿಂಹಮೂರ್ತಿ, ಎಚ್.ಸಿ.–125, ಡಿ.ಸಿ.ಆರ್.ಬಿ., ಜಿಲ್ಲಾ ಪೊಲೀಸ್ ಕಛೇರಿ, ತುಮಕೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು ಇವರ ಆದೇಶ ಸಂಖ್ಯೆ: ಪನ್ನಿ/26/2007–08 ಓ.ಬಿ.ಸಂ:537/07 ದಿನಾಂಕ:19–11–07.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು/ 49/2007–08 ಓ.ಬಿ:5/2007–08 ದಿನಾಂಕ:11–03–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13–05–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)28/2008–09, ದಿನಾಂಕ:09–07–2008.

**ಪ್ರಸ್ತಾವನೆ:**

ಶ್ರೀ ನರಸಿಂಹಮೂರ್ತಿ, ಎಚ್.ಸಿ.–125, ಡಿ.ಸಿ.ಆರ್.ಬಿ., ಜಿಲ್ಲಾ ಪೊಲೀಸ್ ಕಛೇರಿ, ತುಮಕೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ನಿಮಗೆ ದಿ:19–02–2007 ರಂದು ನಡೆಸಿದ ಡಿ.ಸಿ.ಆರ್.ಬಿ. ಶಾಖೆಯ ಸಮೀಕ್ಷಾ ಸಭೆಯಲ್ಲಿ ಈ ಹಿಂದೆ ನಡೆಸಿದ ಸಭೆಯಲ್ಲಿ ಶಾಖೆಯ ಕಡತಗಳನ್ನು ಮಂಡಿಸುವ ಬಗ್ಗೆ ವಿವರವಾಗಿ ತಿಳಿಸಿದ್ದರೂ ಸಹ ಡಿ.ಸಿ.ಆರ್.ಬಿ. ಶಾಖೆ, ಸಿ.ಆರ್.ಬಿ.(4) ಸಿ.ಸಿ.21/2007ರ ಕಡತದಲ್ಲಿ ಡಿ.ಎಸ್.ಪಿ. ತುಮಕೂರು ಗ್ರಾಮಾಂತರ ರವರು ಸಲ್ಲಿಸಿರುವ

ವರದಿಯನ್ನು ಯದಾವತ್ತಾಗಿ ಸಹಿ ಪಡೆಯಲು ಕಡತವನ್ನು ಮಂಡಿಸಿ, ಅದರಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಹಾಗೂ ಕೇಂದ್ರ ವಲಯ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರಿಗೆ ವರದಿ ಸಲ್ಲಿಸಲು ತಪ್ಪು ಮಾಹಿತಿಯನ್ನು ಸಲ್ಲಿಸಲು ಮಂಡಿಸಿ, ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತೆ ಮತ್ತು ಬೇಜವಾಬ್ದಾರಿತನ ಎಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ತುಮಕೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 19–11–07ರ ಆದೇಶದಲ್ಲಿ ಅರ್ಜಿದಾರರ "ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸುವ ದಂಡನೆಯನ್ನು" ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 11–03–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿದಾರರು ಕರ್ತವ್ಯದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ಎಸಗಿರುವುದು ಸಾಬೀತಾಗಿದೆ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 267 ಪೊಸಿಅ 2008 ಬೆಂಗಳೂರು, ದಿನಾಂಕ: 5ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನರಸಿಂಹಮೂರ್ತಿ, ಎಚ್.ಸಿ.–125, ಡಿ.ಸಿ.ಆರ್.ಬಿ., ಜಿಲ್ಲಾ ಪೊಲೀಸ್ ಕಛೇರಿ, ತುಮಕೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.355

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ.ಬಿ. ತಿಗಡೊಳ್ಳಿ, ನಿವೃತ್ತ ಎ.ಎಸ್.ಐ. ಸದಲಗಾ ಪೊಲೀಸ್ ಠಾಣೆ, ಬೆಳಗಾಂ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಇವಿ/10/2007, ದಿನಾಂಕ:20–11–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ:ಅಪೀಲು 01/ಉವ/2008 ದಿನಾಂಕ:15–03–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:29–05–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)33/2008–09, ದಿನಾಂಕ:28–08–2008.

**ಪ್ರಸ್ತಾವನೆ:**

ಶ್ರೀ ಎಂ.ಬಿ. ತಿಗಡೊಳ್ಳಿ, ಇವರು ಸದಲಗಾ ಪೊಲೀಸ್ ಠಾಣೆಯಲ್ಲಿ ಎ.ಎಸ್.ಐ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯಲೋಪ ಹಾಗೂ ದುರ್ನಡತೆ ಪ್ರದರ್ಶಿಸಿರುವ ಹಿನ್ನೆಲೆಯಲ್ಲಿ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿಯಾದ ಎಂ.ಬಿ.ತಿಗಡೊಳ್ಳಿ, ನೀವು ಸದಲಗಾ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ದಿ:14–10–2006 ಮತ್ತು 15–10–2006 ರಂದು ನಿಮಗೆ ಭೋಜ, ಬೆಡಕಿಹಾಳ,

ವಡಗೋಲ, ಮಲಿಕವಾಡ ಗ್ರಾಮಗಳ ಬೇಟಿ ಚಕ್ಕಿಂಗ್ ಕರ್ತವ್ಯಕ್ಕೆ ನೇಮಿಸಿದಾಗ ನೀವು ಅನಧೀಕೃತವಾಗಿ ದಿ:15–10–2006 ರಂದು ಮುಂಜಾನೆ 10.30 ಗಂಟೆಗೆ ಎಕ್ಸಂಬಾ ಗ್ರಾಮಕ್ಕೆ ಹೋಗಿ, ಎಕ್ಸಂಬಾ ಗ್ರಾಮದ ರಹವಾಸಿಯಾದ ಕುಮಾರಿ ಅಶ್ವಿನಿ ನಾನಾಸಾಹೇಬ ಖೋತ ಮತ್ತು ಅವರ ಅಜ್ಜಿ ಗಂಗೂಬಾಯಿ ವಿಶ್ವಾನಾಥ ಡೋಗರೆ ಇವರ ಮನೆಗೆ ಹೋಗಿ ಕುಮಾರಿ ಆಸ್ವಿನಿ ನಾನಾಸಾಹೇಬ ಖೋತ ಇವರ ಕೈ ಹಿಡಿದು ಎಳೆದಾಡಿ "ನಿನ್ನ ತಂದೆ ಎಲ್ಲಿದ್ದಾರೆ ಹೇಳು, ಇಲ್ಲದಿದ್ದರೆ ನಿಮ್ಮನ್ನು ಸುಮ್ಮನೆ ಬಿಡುವುದಿಲ್ಲ" ಅಂತಾ ಅಂಜಿಕೆ ಹಾಕಿದ್ದಲ್ಲದೇ, ಅವರ ಅಜ್ಜಿ ಗಂಗೂಬಾಯಿ ಇವರನ್ನು ನುಗಿಶ್ಯಾಡಿ ಅವರಿಬ್ಬರಿಗೂ ಅವಾಚ್ಯ ಶಬ್ದ ಗಳಿಂದ ಬೈಯ್ದು ಅವರೊಂದಿಗೆ ಅಸಭ್ಯವಾಗಿ ವರ್ತಿಸಿ, ನೀವು ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಹಾಗೂ ಕರ್ತವ್ಯಲೋಪವನ್ನು ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ದೃಢಪಟ್ಟಿರುವುದಿಲ್ಲವೆಂದು ಅಭಿಪ್ರಾಯ ನೀಡಿದ್ದಾರೆ. ಶಿಸ್ತು ಪ್ರಾಧಿಕಾರವು ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪದೆ ಅರ್ಜಿದಾರರಿಗೆ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 20–11–2007ರ ಆದೇಶದಲ್ಲಿ ಅರ್ಜಿದಾರರ ಮೂರು ಹಂತ ವಾರ್ಷಿಕ ವೇತನ ಬಡ್ತಿಗಳನ್ನು ಅವರ ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಇಳಿಸುವ ದಂಡನೆಯನ್ನು ವಿಧಿಸಿ ದಿ:11–03–2007 ರಿಂದ 25–09–2007ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲ್ಮನವಿಯಲ್ಲಿ ಪರಿಗಣಿಸಿ ಅರ್ಜಿದಾರರು ಸೇವೆಯಿಂದ ವಯೋನಿವೃತ್ತಿ ಹೊಂದುತ್ತಿರುವುದರಿಂದ ಶಿಸ್ತುಪ್ರಾಧಿಕಾರದ ಆದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಈಗಿನ ವೇತನದ ಒಂದು ಹಂತವನ್ನು ಕೆಳಗಿಳಿಸಿ, ಅಮಾನತ್ತಿನ ಅವಧಿ ದಿ:11–03–2007 ರಿಂದ 25–09–2007ರ ವರೆಗಿನ ಅವಧಿಯನ್ನು ಅವರ ಹಕ್ಕಿನಲ್ಲಿರುವ ರಜೆಯೆಂದು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 15–03–2008 ರಂದು ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿ ಪ್ರಾಧಿಕಾರವು ದಂಡನೆಯ ಪ್ರಮಾಣವನ್ನು ಕಡಿಮೆಗೊಳಿಸಿದ್ದಾರೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಸಮರ್ಥನೀಯ ಅಂಶಗಳು ಇರುವುದಿಲ್ಲ. ಪರಿಷ್ಕರಣ ಮೇಲ್ಮನವಿದಾರರು ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 316 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ನವೆಂಬರ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಬಿ. ತಿಗಡೊಳ್ಳಿ, (ನಿವೃತ್ತ) ಎ.ಎಸ್.ಐ. ಸದಲಗಾ ಪೊಲೀಸ್ ಠಾಣೆ, ಬೆಳಗಾಂ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.291

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎ.ಬಿ. ಹಪ್ಪಳಿ, ಪೊಲೀಸ್ ಇನ್ಸ್‌ಪೆಕ್ಟರ್, ಸವದತ್ತಿ ಪೊಲೀಸ್ ಠಾಣೆ, ಬೆಳಗಾವಿ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಡಿಇ/47/ಉವ/99, ದಿನಾಂಕ:29–06–2001.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು (6)23/2001–02 ದಿನಾಂಕ:11–01–2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:27–05–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)36/2008–09, ದಿನಾಂಕ:07–10–2008.

**ಪ್ರಸ್ತಾವನೆ:**

ಶ್ರೀ ಎ.ಬಿ. ಹಪ್ಪಳಿ, ಪೊಲೀಸ್ ಇನ್ಸ್‌ಪೆಕ್ಟರ್, ಸವದತ್ತಿ ಸರ್ಕಲ್, ಬೆಳಗಾವಿ, ಇವರು ನಿಪ್ಪಾಣಿ ಗ್ರಾಮಂತರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರು ಮತ್ತು ಇತರರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿದ ಹಿನ್ನೆಲೆಯಲ್ಲಿ ಇತರ ಸಿಬ್ಬಂದಿಯೊಂದಿಗೆ ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆಗೆ 8ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

> "ದಿ:16–09–99 ರಂದು ಅರ್ಜಿದಾರರ ಅಸಪಾಕ ಹಜರತ್‌ಭಾಯಿ ಈತನು ನಿಮ್ಮ ಮುಂದೆ ಹಾಜರಾಗಿ ಲಿಖಿತ ಅರ್ಜಿ ನೀಡಿದ್ದು, ಅದರಲ್ಲಿ ಹಣದ ಕೊಡತೊಗೊಳ್ಳುವ ವ್ಯವಹಾರ ಇದ್ದು ಸದರಿ ವಿಷಯ ದಿವಾಣಿ ಸ್ವರೂಪದ್ದು ಎಂದು ಗೊತ್ತಿದ್ದರೂ ಕೂಡಾ ಅದರಲ್ಲಿ ಪೊಲೀಸರು ಹಸ್ತಕ್ಷೇಪ ಮಾಡಬಾರದು ಎಂದು ತಿಳಿಸಿದ್ದರೂ ಸಹಿತ ಸದರಿ ಅರ್ಜಿಯನ್ನು ಯಾವುದೇ ದಾಖಲಾತಿಗೆ ತೆಗೆದು ಕೊಳ್ಳದೇ ನೀವು ಸದರಿ ಅರ್ಜಿಯ ವಿಚಾರಣೆಗಾಗಿ ಸಿ.ಪಿ.ಸಿ. ಬನಂ:2396, ಎಸ್.ಎ. ಸಾದಾಗಾರ್, ಇವರನ್ನು ಬೆಳಗಾಂವಕ್ಕೆ ಕಳುಹಿಸಿ ಮುನೀರ ಲಾಡಖಾನ್ ಇವರನ್ನು ಠಾಣೆಗೆ ಕರೆಯಿಸಿ ಉಳ್ಳಾಗಡ್ಡಿ ಖಾನಾಪೂರದಿಂದಾ ಅಸಪಾಕ ಹಜರತ್‌ಭಾಯಿ ಇವರ ಹಣದ ವ್ಯವಹಾರದ ಬಗ್ಗೆ ಮುನೀರನಿಗೆ ಒತ್ತಾಯದಿಂದ ರೂ:48,000–00 ಹಣಾ ಕೊಡಲಿಕ್ಕೆ ತಿಳಿಸಿ ಬರೆಯಿಸಿಕೊಂಡಿದ್ದು ಅಲ್ಲದೇ ಹಣ ಕೊಡುವವರೆಗೆ ಅರ್ಜಿದಾರಳಾದ ಶ್ರೀಮತಿ ನಾಸರಬಿ ಲಾಡಖಾನ ಇವರ ಮೈದುನ ನಾಶಾದ ಲಾಡಖಾನ್ ಈತನನ್ನು ಠಾಣೆಯಲ್ಲಿ ಕೂಡ್ರಿಸಿ ಹಣ ತರಲು ಸಿಪಿಸಿ 1812, ಎಸ್.ಆರ್.ಪಾಟೀಲ ಹಾಗೂ ಸಿ.ಪಿ.ಸಿ. ಬನಂ:2379 ಬಿ.ಎಸ್. ನಾಗನ್ನವರ ಇವರನ್ನು ಬೇಳಗಾಂವಿಯ ಅನಗೋಳಕ್ಕೆ ಕಳುಹಿಸಿ ಅವರಿಂದಾ ರೂ.48,000–00 ಹಣವನ್ನು ಅಸಪಾಕ ಹಜರತ್‌ಭಾಯಿ ಮತ್ತು ಅವನ ಅಣ್ಣ ಅಬ್ದುಲ್ ಹಜರತ್‌ಭಾಯಿ ಇವರಿಗೆ ಕೊಡಿಸ ಘೋರ ದುರ್ನಡತೆ ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿ: 29–06–2001ರ ಆದೇಶದಲ್ಲಿ "ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷ ಕಾಲ ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ ತಡೆಹಿಡಿಯುವ ದಂಡನೆಯನ್ನು" ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಒಂದು ವರ್ಷಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:11–01–2003 ರಿಂದ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 388 ಪೊಸಿಅ 2008 ಬೆಂಗಳೂರು, ದಿನಾಂಕ: 16ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಎ.ಬಿ. ಹಪ್ಪಳಿ, ಪೊಲೀಸ್ ಇನ್ಸ್‌ಪೆಕ್ಟರ್, ಸವದತ್ತಿ ಸರ್ಕಲ್, ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.441

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ವೈ. ಮೋಹನ್, ಪಿ.ಎಸ್.ಐ., ಬಂಗಾರಪೇಟೆ, ಪೊಲೀಸ್ ಠಾಣೆ, ಕೆ.ಜಿ.ಎಫ್., ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ: ಪನ್ನಿ/ಡಿಇ/5/2007–08, ಓ.ಬಿ:91/2007–09 ದಿನಾಂಕ:01–08–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು (6)70/2007–08 ಓ.ಬಿ.ಸಂ:7/ 2008–09 ದಿನಾಂಕ: 28–04–2008.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13–06–2008.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)38/2008–09, ದಿನಾಂಕ:13–10–2008.

**ಪ್ರಸ್ತಾವನೆ:**

ಶ್ರೀ ಎಸ್.ವೈ. ಮೋಹನ್, ಪಿ.ಎಸ್.ಐ., ಬಂಗಾರಪೇಟೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯಲೋಪವೆಸಗಿನ ಆರೋಪದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

"ಶ್ರೀ ಎಸ್.ವೈ. ಮೋಹನ್, ಪಿ.ಎಸ್.ಐ., ಆದ ನೀವು ಬಂಗಾರಪೇಟೆ ಪೊಲೀಸ್ ಠಾಣೆಯಲ್ಲಿ ಕಾನೂನು ಮತ್ತು ಸುವ್ಯವಸ್ಥೆ ವಿಭಾಗದಲ್ಲಿ ದಿ:15–04–07 ರಿಂದ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ಬಂಗಾರಪೇಟೆ ಠಾಣಾ ಸರಹದ್ದಿಗೆ ಸೇರಿದ ಕೀಲುಕೊಪ್ಪ ಗ್ರಾಮದಲ್ಲಿ ದಿ:23–04–07 ಮತ್ತು 24–04–07 ರಂದು ಶ್ರೀ.ಮಾರಿಯಮ್ಮ ದೇವಿ ಜಾತ್ರಾ ಮಹೋತ್ಸವದ ಕಾರ್ಯಕ್ರಮ ಏರ್ಪಾಡು ಮಾಡಿರುವುದು ಸರಿಯಷ್ಟೆ. ದಿ:24–04–07 ರಂದು ರಾತ್ರಿ ಯುವಕರು ಮತ್ತು ಯುವತಿಯರು ನೃತ್ಯ ಪ್ರದರ್ಶಿಸುತ್ತಿದ್ದು, ರಾತ್ರಿ ಸುಮಾರು 2.00 ಗಂಟೆ ಸಮಯದಲ್ಲಿ ನೃತ್ಯ ತಂಡದವರುಗಳು ಅಶ್ಲೀಲ ನೃತ್ಯ ಪ್ರದರ್ಶಿಸಿರುತ್ತಾರೆ. ಈ ದೃಶ್ಯವನ್ನು ದಿ:27–04–07 ರಂದು ಟಿ.ವಿ.–9 ಚಾನಲ್‌ನಲ್ಲಿ ಪ್ರದರ್ಶಿಸಲಾಗಿದೆ. ನೀವು ದಿ:24–04–2007 ರಂದು ರಾತ್ರಿ ಜಾತ್ರೆ ಬಂದೋಬಸ್ತ್‌ನಲ್ಲಿದ್ದು, ಅಶ್ಲೀಲ ಡ್ಯಾನ್ಸ್ ನಡೆಯುವ ಬಗ್ಗೆ ಗೊತ್ತಿದ್ದರೂ ಸಹ ಅಶ್ಲೀಲ ಡ್ಯಾನ್ಸ್ ನಡೆಯಲು ಆಸ್ಪದ ನೀಡಿರುತ್ತೀರಿ ಮತ್ತು ಕಾರ್ಯಕ್ರಮ ಆಯೋಜಿಸಿದ್ದವರ ಮೇಲೆ ತಕ್ಷಣ ಕ್ರಮ ತೆಗೆದುಕೊಳ್ಳದೆ ನೀವು ದಿ:27–04–2007ರ ವರೆಗೆ ಸುಮ್ಮನಿದ್ದು, ಎಲ್ಲಾ ಮಾದ್ಯಮಗಳಲ್ಲಿ ಈ ಬಗ್ಗೆ ಪ್ರಚಾರಗೊಂಡ ನಂತರ ಎಸ್.ಬಿ.ಪೇದೆ 16 ನೀಡಿದ ಮಾಹಿತಿ ಮೇರೆಗೆ ಕೇಸು ದಾಖಲಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 01–08–2007ರ ಆದೇಶದಲ್ಲಿ ಅರ್ಜಿದಾರರ "ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷಕಾಲ ಮುಂದೂಡುವ ಹಾಗೂ ದಿ:28–04–2007 ರಿಂದ 22–05–2007ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ" ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:28–04–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 197 ಪೊಸಿಅ 2008 ಬೆಂಗಳೂರು, ದಿನಾಂಕ: 13ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೋಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ. ಎಸ್.ವೈ. ಮೋಹನ್, ಪಿ.ಎಸ್.ಐ., ಬಂಗಾರಪೇಟೆ, ಕೆ.ಜಿ.ಎಫ್., ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.452

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಸಚ್ಚಿದಾನಂದ, ಪಿ.ಎಸ್.ಐ. ಬಂಡಿಗನವಿಲೆ, ಮಂಡ್ಯ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ2/ಪಿಆರ್7:07–08, ಓ.ಬಿ.:104/07–08, ದಿನಾಂಕ 24–6–2007.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/30/2007–08, ದಿನಾಂಕ 15–11–2007.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 10–1–2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)127/2007–08, ದಿನಾಂಕ 1–3–2008.

**ಪ್ರಸ್ತಾವನೆ :**

ಶ್ರೀ ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ ಸಂಚಾರಿ ಪೊಲೀಸ್ ಠಾಣೆ, ಹಾಲಿ ಬಿಂಡಿಗನವಿಲೆ, ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ದುರ್ನಡತೆ ಎಸಗಿರುವ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

> "ನೀವು ಪಿ.ಎಸ್.ಐ. ಮಂಡ್ಯ ಸಂಚಾರಿ ಪೊಲೀಸ್ ಠಾಣೆ–2ರಲ್ಲಿ ಕರ್ತವ್ಯ ನಿರ್ವಹಿಸುತ್ತಿರುತ್ತೀರಿ. ಮರಳು ಸಾಗಾಣಿಕೆ ಮಾಡುತ್ತಿರುವ ವಾಹನಗಳಿಗೆ ನೀವು ಅನಾವಶ್ಯಕವಾಗಿ ತೊಂದರೆ ಕೊಟ್ಟು, ಅವರುಗಳಿಂದ ಬಲವಂತವಾಗಿ ಹಣ ವಸೂಲಿ ಮಾಡುತ್ತಿರುತ್ತೀರಿ ಎಂದು ಪೆಡರೇಷನ್ ಆಫ್ ಕರ್ನಾಟಕ ಸ್ಟೇಟ್ ಲಾರಿ ಓನರ್ಸ್ ಅಂಡ್ ಏಜೆಂಟ್ಸ್ ಅಸೋಸಿಯೇಷನ್, ಬೆಂಗಳೂರು, ರವರು ದಿನಾಂಕ 19–4–2007 ರಂದು ದೂರನ್ನು ನೀಡಿ ಆಪಾದಿಸಿರುತ್ತಾರೆ. ಹೀಗೆ ನೀವು ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಹಣದ ಆಮಿಷಕ್ಕೆ ಒಳಗಾಗಿ ಸಮಾಜಘಾತುಕ ಚಟುವಟಿಕೆಯಲ್ಲಿ ತೊಡಗುವುದರ ಮೂಲಕ ಕರ್ತವ್ಯದಲ್ಲಿ ಅತೀವ ದುರ್ನಡತೆ ಎಸಗಿರುತ್ತೀರಿ. ಆದ್ದರಿಂದ ಈ ಆರೋಪ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಪರಿಶೀಲಿಸಿ ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ 24–6–2007ರ ಆದೇಶದಲ್ಲಿ ಅರ್ಜಿದಾರರಿಗೆ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಎರಡು ವರ್ಷಗಳ ಕಾಲ ನಂತರದ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ 15–11–07ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಯಾವುದೇ ಸಮರ್ಥನೀಯ ಅಂಶಗಳು ಕಂಡುಬಾರದ ಕಾರಣ ಹಾಗೂ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು

ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 90 ಪೊಸಿಅ 2008, ಬೆಂಗಳೂರು, ದಿನಾಂಕ: 12ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಚ್ಚಿದಾನಂದ, ಪಿ.ಎಸ್.ಐ., ಮಂಡ್ಯ ಸಂಚಾರಿ ಪೊಲೀಸ್ ಠಾಣೆ, ಹಾಲಿ ಬಿಂಡಿಗನವಿಲೆ, ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 453

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕನ್ನಡ ಲಿಪಿ ತಂತ್ರಾಂಶಗಳ ಶಿಷ್ಟತೆ ಮತ್ತು ಏಕರೂಪತೆ, ಏಕರೂಪಿ ಅಕ್ಷರ ಭಾಗಗಳು ಹಾಗು ತಂತ್ರಾಂಶಗಳಲ್ಲಿ ದ್ವಿಭಾಷ ಅಕ್ಷರ ರೂಪಗಳಿಗೆ ಬಳಸಬೇಕಾದ ಸಂಕೇತಗಳು.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ ಮಾತಂಇ 6 ನೀಸಂವಿ 2000 ದಿನಾಂಕ 19–5–2000.
2. ಸರ್ಕಾರದ ಆದೇಶ ಸಂಖ್ಯೆ ಮಾತಂಇ 6 ನೀಸಂವಿ 2000 ದಿನಾಂಕ 1–11–2000.
3. ಸರ್ಕಾರದ ಆದೇಶ ಸಂಖ್ಯೆ ಮಾತಂಇ 6 ನೀಸಂವಿ 2000 ದಿನಾಂಕ 15–01–2001.
4. ನ್ಯಾಯಾಲಯದ ಆದೇಶ ಸಂಖ್ಯೆ ರಿಟ್ ಪೆಟಿಷನ್ ಸಂಖ್ಯೆ 26657/2004, ದಿನಾಂಕ: 23–7–2007.
5. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 67 ಇಆಇ 2004 ದಿನಾಂಕ 12–09–2007.
6. ಸಮಿತಿಯ ನಡವಳಿ ದಿನಾಂ:18–9–2007.
7. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 67 ಇಆಇ 2004, ದಿನಾಂಕ 18–10–2007.
8. ಸರ್ಕಾರದ ಆದೇಶ ಸಂಖ್ಯೆ: ಸಿ.ಆ.ಸು.ಇ 39 ಇಆಇ 2008 ದಿನಾಂಕ 25–04–2008.
9. ಸಮಿತಿಯ ನಡವಳಿ ದಿನಾಂಕ 09.07.2008.
10. ನ್ಯಾಯಾಲಯದ ಆದೇಶ ಸಂಖ್ಯೆ ರಿಟ್ ಪೆಟಿಷನ್ ಸಂಖ್ಯೆ 26657/2004 ದಿನಾಂಕ:1–7–2008.
11. ಶ್ರೀ ಪದ್ಮರಾವ್, ತಜ್ಞರು ರವರ ಪತ್ರ ದಿ:15–10–2008 ಮತ್ತು 21–10–2008.
12. ಸಮಿತಿಯ ನಡವಳಿ ದಿನಾಂಕ:11–12–2008.

**ಪ್ರಸ್ತಾವನೆ:**

ಮೇಲೆ 1 ರಲ್ಲಿ ಓದಲಾದ ದಿನಾಂಕ: 19–05–2000ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ವ್ಯಾಪಕವಾಗಿ ಕನ್ನಡ ತಂತ್ರಾಂಶಗಳನ್ನು ಅಭಿವೃದ್ಧಿಗೊಳಿಸಿ ರಾಜ್ಯದಲ್ಲಿ ದೈನಂದಿನ ಆಡಳಿತವನ್ನು ಗಣಕೀಕರಿಸಲು ಅನುಕೂಲವಾಗುವ ದಿಸೆಯಲ್ಲಿ ಕನ್ನಡ ತಂತ್ರಾಂಶಗಳ ತ್ವರಿತ ಅಭಿವೃದ್ಧಿ ಪಡಿಸುವಿಕೆ ಮತ್ತು ಅವುಗಳಲ್ಲಿ ಶಿಷ್ಟತೆ ಹಾಗೂ ಏಕರೂಪತೆ ತರಲು ಅಗತ್ಯವಾದ ಕ್ರಮಗಳನ್ನು ನಿರ್ಧರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕಾರ್ಯದರ್ಶಿಯವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಲಾಗಿದೆ.

ಈ ಸಮಿತಿಯು ಕನ್ನಡ ಲಿಪಿ ತಂತ್ರಾಂಶಗಳ ಶಿಷ್ಟತೆ ಮತ್ತು ಏಕರೂಪತೆಗೆ ಸಂಬಂಧಿಸಿದಂತೆ ಸಲ್ಲಿಸಿದ್ದ ವರದಿಯಲ್ಲಿ ಸೂಚಿಸಿದ್ದಂತೆ ಕನ್ನಡ ಲಿಪಿಗೆ ಬೇಕಾದ ಶಿಷ್ಟತೆ ಮತ್ತು ಏಕರೂಪಿ ಅಕ್ಷರ ಭಾಗಗಳು (ಗ್ಲಿಪ್ಸ್) ಹಾಗೂ ತಂತ್ರಾಂಶದಲ್ಲಿ ಏಕಭಾಷಾ ಅಕ್ಷರ ರೂಪಗಳಿಗೆ ಬಳಸಬೇಕಾದ ಸಂಕೇತಗಳನ್ನು ನಿಗಧಿಪಡಿಸಿ ಅವುಗಳನ್ನು ಕನ್ನಡ ಲಿಪಿ ತಂತ್ರಾಂಶ ತಯಾರಕರು ಕಡ್ಡಾಯವಾಗಿ ಬಳಸಬೇಕೆಂದು ಮೇಲೆ (2) ರಲ್ಲಿ ಓದಲಾದ ದಿನಾಂಕ:01–11–2000ರ ಸರ್ಕಾರಿ ಆದೇಶದಲ್ಲಿ ತಿಳಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಿನಾಂಕ:1–11–2000ರ ಆದೇಶಕ್ಕೆ ಅನುಬಂಧಿಸಿದ ಅಕ್ಷರ ಭಾಗ (ಗ್ಲಿಪ್ಸ್) ಗಳು ಮತ್ತು ಅವುಗಳ ಸಂಕೇತಗಳಿಗೆ ಭಾಗಶ: ತಿದ್ದುಪಡಿ ಮಾಡಲಾಗಿದೆ. ಕರ್ನಾಟಕ ಸರ್ಕಾರವು ಸಿದ್ಧ ಪಡಿಸಿರುವ ನುಡಿ ಕನ್ನಡ ತಂತ್ರಾಂಶವು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನಿಗಧಿ ಪಡಿಸಿರುವ ಶಿಷ್ಟತೆ ಮತ್ತು ಏಕರೂಪತೆಯನ್ನು ಉಲ್ಲಂಘಿಸಿರುವುದಾಗಿ ಆಪಲ್ ಸಾಫ್ಟ್ ಕಂಪನಿಯ ಶ್ರೀ ಅನ್ವರನನ್ ರವರು ನ್ಯಾಯಾಲಯದಲ್ಲಿ ರಿಟ್ ಪೆಟಿಷನ್ ಸಂಖ್ಯೆ 26657/2004 ದಾವೆ ಹೂಡಿದ್ದು, ಮೇಲೆ (4)ರಲ್ಲಿ ಓದಲಾದ ದಿನಾಂಕ:23–07–2007ರ ನ್ಯಾಯಾಲಯದ

ಆದೇಶದಲ್ಲಿ ನ್ಯಾಯಾಲಯವು ಮನವಿದಾರರಿಗೆ ಅವರ ಕುಂದು ಕೊರತೆಗಳನ್ನು ಸರ್ಕಾರಕ್ಕೆ ದಿನಾಂಕ: 23–7–2007ರಿಂದ ಒಂದು ವಾರದೊಳಗೆ ಸಲ್ಲಿಸಬೇಕೆಂದು ಹಾಗೂ ಸರ್ಕಾರವು ಇದರ ಬಗ್ಗೆ ವಿಚಾರಣೆ ನಡೆಸಿ ಸೂಕ್ತ ನಿರ್ಣಯವನ್ನು ತೆಗೆದುಕೊಂಡು 2 ತಿಂಗಳೊಳಗೆ ನ್ಯಾಯಾಲಯಕ್ಕೆ ತಿಳಿಸಬೇಕೆಂದು ತೀರ್ಪು ನೀಡಿರುತ್ತದೆ.

ನ್ಯಾಯಾಲಯಕ್ಕೆ 22–9–2007ರೊಳಗೆ ಸರ್ಕಾರವು ತೆಗೆದುಕೊಂಡ ನಿಲುವಿನ ಬಗ್ಗೆ ತಿಳಿಸಬೇಕಾಗಿರುವುದರಿಂದ ಮೇಲೆ (5)ರಲ್ಲಿ ಓದಲಾದ ದಿನಾಂಕ:12–09–2007ರ ಸರ್ಕಾರಿ ಆದೇಶದಲ್ಲಿ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯು ಮೇಲೆ (6)ರಲ್ಲಿ ಓದಲಾದ ದಿನಾಂಕ:18–09–2007ರ ವರದಿಯಲ್ಲಿ ಕನ್ನಡ ಲಿಪಿ ತಂತ್ರಾಂಶ ತಯಾರಕರು ಅಭಿವೃದ್ಧಿ ಪಡಿಸಿದ ತಂತ್ರಾಂಶಗಳಲ್ಲಿ ದ್ವಿಭಾಷೆ ಅಕ್ಷರ ರೂಪಗಳಿಗೆ ಸಂಬಂಧಿಸಿದಂತೆ, ತಮ್ಮದೇ ಆದ ದ್ವಿಭಾಷೆ ಅಕ್ಷರ ಭಾಗಗಳು (ಗ್ಲಿಪ್ಸ್) ಹಾಗೂ ಸಂಕೇತಗಳ ತಂತ್ರಾಂಶಗಳನ್ನು ನೀಡಬಹುದಾಗಿದ್ದು, ಹೀಗೆ ನೀಡಿದ ತಂತ್ರಾಂಶದ ಜೊತೆಗೆ ಸದರಿ ದ್ವಿಭಾಷೆ ಅಕ್ಷರ ಭಾಗಗಳು (ಗ್ಲಿಪ್ಸ್) ಮತ್ತು ಸಂಕೇತದ ಮೂಲಕ ಸಿದ್ಧಪಡಿಸಿದ ಪಠ್ಯ, ದತ್ತಾಂಶಗಳನ್ನು ಏಕಭಾಷೆ ಅಕ್ಷರ ರೂಪಗಳಿಗೆ ಪರಿವರ್ತಿಸಬಹುದಾದ ಸಾಧನವನ್ನು ನೀಡಬೇಕು ಮತ್ತು ಹಾಗೆ ಪರಿವರ್ತಿಸಲ್ಪಟ್ಟ ಏಕಭಾಷೆ ಅಕ್ಷರ ರೂಪದ, ಅಕ್ಷರ ಭಾಗಗಳ (ಗ್ಲಿಪ್ಸ್) ಮತ್ತು ಸಂಕೇತವು ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿನ ಶಿಷ್ಟತೆಗಳಿಗನುಸಾರವಿರಬೇಕೆಂದು ಶಿಫಾರಸ್ಸು ಮಾಡಿರುತ್ತದೆ. ಅದರಂತೆ ಸದರಿ ಆದೇಶಕ್ಕೆ ಕ್ರಮ ಸಂಖ್ಯೆ:7 ಎಂದು ಸೇರಿಸಿ ಮೇಲೆ (7)ರಲ್ಲಿ ಓದಲಾದ ದಿನಾಂಕ: 18–10–2007ರ ಸರ್ಕಾರಿ ಆದೇಶದಲ್ಲಿ ಸೇರ್ಪಡೆ ಮಾಡಲಾಗಿದೆ.

ಮೊಕದ್ದಮೆ ಸಂಖ್ಯೆ ಸಂಖ್ಯೆ 26657/2004 ಕ್ಕೆ ಸಂಬಂಧಿಸಿದಂತೆ ನ್ಯಾಯಾಲಯವು ದಿ:24–3–2008ರಂದು, ಕನ್ನಡ ಲಿಪಿಗೆ ಬೇಕಾದ ಶಿಷ್ಠತೆ ಮತ್ತು ದ್ವಿಭಾಷೆ ಅಕ್ಷರ ರೂಪಗಳಿಗೆ ಬಳಸಬೇಕಾದ ಸಂಕೇತವನ್ನು ನಿಗಧಿಪಡಿಸಲು ಸಾಧ್ಯವೇ ಹಾಗೆ ಸಾಧ್ಯವಿದ್ದಲ್ಲಿ ಎಷ್ಟು ದಿನಗಳಲ್ಲಿ ಆದೇಶ ಹೊರಡಿಸಲಾಗುವುದು ಎಂಬ ಬಗ್ಗೆ ಮಾಹಿತಿ ನೀಡುವಂತೆ ಸೂಚಿಸಿದ್ದರ ಮೇರೆಗೆ ನ್ಯಾಯಾಲಯಕ್ಕೆ ಸರ್ಕಾರದ ನಿಲುವನ್ನು ತಿಳಿಸಲು ಮೇಲೆ ಓದಲಾದ (8)ರ ದಿನಾಂಕ:25–04–2008ರ ಸರ್ಕಾರಿ ಆದೇಶದಲ್ಲಿ ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆ ರವರ ನೇತೃತ್ವದಲ್ಲಿ ಸಮಿತಿಯನ್ನು ರಚಿಸಲಾಗಿದೆ.

ಮೇಲೆ (9)ರಲ್ಲಿ ಓದಲಾದ ದಿನಾಂಕ 09.02.2008ರ ನಡುವಳಿಯಲ್ಲಿ ಕನ್ನಡ ದ್ವಿಭಾಷಾ ಅಕ್ಷರಗಳ ಬಗ್ಗೆ ಪ್ರಕಟಿಸಿರುವ ಕರಡು ಶಿಷ್ಠತೆ ಬಗ್ಗೆ ಯಾವುದೇ ಆಕ್ಷೇಪ ಇಲ್ಲದಿರುವುದನ್ನು ಸಭೆಯು ಗಮನಿಸಿ ಅಂತಿಮ ದ್ವಿಭಾಷಾ ಶಿಷ್ಠತೆಯೆಂದು ಪರಿಗಣಿಸಲು ತೀರ್ಮಾನಿಸಲಾಯಿತು.

ಕನ್ನಡ ಲಿಪಿಗೆ ಬೇಕಾದ ಶಿಷ್ಠತೆ ಮತ್ತು ದ್ವಿಭಾಷೆ ಅಕ್ಷರ ರೂಪಗಳಿಗೆ ಬಳಸಬೇಕಾದ ಸಂಕೇತಗಳನ್ನು ಅಂತಿಮಗೊಳಿಸುವ ಮುನ್ನ ಮೊಕದ್ದಮೆ ಸಂಖ್ಯೆ ಸಂಖ್ಯೆ 26657/2004ರ ಫಿರ್ಯಾದುದಾರರಿಗೆ ಸಮಿತಿಯ ಮುಂದೆ ಹಾಜರಾಗಲು ಅವಕಾಶ ನೀಡುವಂತೆ ಮೇಲೆ (10)ರಲ್ಲಿ ಓದಲಾದ ದಿನಾಂಕ 01.07.2008ರ ನ್ಯಾಯಾಲಯದ ಆದೇಶದಲ್ಲಿ ತೀರ್ಪು ನೀಡಲಾಗಿತ್ತು. ಅದರಂತೆ ಫಿರ್ಯಾದುರಾರರು ದಿ:8–9–2008ರಂದು ಸಮಿತಿಯ ಮುಂದೆ ಹಾಜರಾಗಿ ಅವರ ಸಲಹೆಯನ್ನು ಲಿಖಿತ ರೂಪದಲ್ಲಿ ಸಮಿತಿಗೆ ಸಲ್ಲಿಸಿದ್ದು, ಅವರ ಸಲಹೆಯನ್ನು ಪರಿಶೀಲಿಸಿದ ತಜ್ಞರು ಶ್ರೀ ಅನ್‌ಬರಸನ್ ರವರು ಸೂಚಿಸಿರುವ ಕೆಲವು ಅಕ್ಷರಗಳು ಈಗಿನ ಕನ್ನಡ ಬಳಕೆಯಲ್ಲಿ ಹೆಚ್ಚಾಗಿರುವುದಿಲ್ಲವೆಂದು, ಆದುದರಿಂದ ಪ್ರಕಟಿಸಿರುವ ದ್ವಿಭಾಷೆ ಅಕ್ಷರ ರೂಪಗಳಿಗೆ ನಿಗಧಿ ಪಡಿಸಿರುವ ಸಂಕೇತಗಳನ್ನು ಅಂತಿಮವೆಂದು ತೀರ್ಮಾನಿಸಬಹುದೆಂದು ಮೇಲೆ (11)ರಲ್ಲಿ ಓದಲಾದ ದಿನಾಂಕ 21.10.2008ರ ಪತ್ರದಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ಇದನ್ನು ಆಧರಿಸಿ ಮೇಲೆ (12) ರಲ್ಲಿ ಓದಲಾದ ದಿನಾಂಕ 11.12.2008ರಂದು ಸರ್ಕಾರದ ಕಾರ್ಯದರ್ಶಿಗಳು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧ್ಯಕ್ಷತೆಯಲ್ಲಿ ನಡೆದ ತಜ್ಞರ ಸಮಿತಿಯ ಸಭೆಯಲ್ಲಿ ಶ್ರೀ ಅನ್‌ಬರಸನ್ ರವರು ಸಲ್ಲಿಸಿರುವ ಸಂಕೇತಗಳ ಸಲಹೆಗಳು ಸರ್ಕಾರದ ದಿನನಿತ್ಯದ ಕೆಲಸದಲ್ಲಿ ಬಳಸದೆ ಇರುವ ಕಾರಣ ಇವರು ಸೂಚಿಸಿರುವ ಸಂಕೇತಗಳನ್ನು ಅಥವಾ ಅಭಿಪ್ರಾಯಗಳನ್ನು ಕೈಬಿಡಬಹುದೆಂದು ತೀರ್ಮಾನಿಸಿ ಮೇಲೆ (9)ರಲ್ಲಿ ಓದಲಾದ ಸಮಿತಿಯ ನಡುವಳಿಯಲ್ಲಿ ನಿರ್ಣಯಿಸಿದಂತೆ ಕನ್ನಡ ತಂತ್ರಾಂಶ ದ್ವಿಭಾಷಾ ಸಂಕೇತಗಳನ್ನು ಅನುಮೋದಿಸಲು ತೀರ್ಮಾನಿಸಿ ಸೂಕ್ತ ಆದೇಶವನ್ನು ಹೊರಡಿಸಲು ಒಪ್ಪಲಾಯಿತು.

ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 11 ಕೆಓಎಲ್ 2008, ಬೆಂಗಳೂರು, ದಿ: 7ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕನ್ನಡ ತಂತ್ರಾಂಶಗಳಲ್ಲಿ ದ್ವಿಭಾಷ ಅಕ್ಷರ ರೂಪಗಳಿಗೆ ಬಳಸಬೇಕಾದ ಅಕ್ಷರ ಭಾಗಗಳು ಮತ್ತು ಸಂಕೇತಗಳ ಬಗ್ಗೆ ಈ ಕೆಳಗಿನಂತೆ ಆದೇಶಿಸಿದೆ.

1) ಯಾವುದೇ ಇಲಾಖೆಗೆ ದ್ವಿಭಾಷೆ (ಕನ್ನಡ ಮತ್ತು ಇಂಗ್ಲೀಷ್) ಅಕ್ಷರ ರೂಪಗಳುಳ್ಳ ಕನ್ನಡ ತಂತ್ರಾಂಶದ ಅಗತ್ಯವಿದ್ದಲ್ಲಿ, ತಂತ್ರಾಂಶ ತಯಾರಕರು ಈ ಆದೇಶಕ್ಕೆ ಲಗತ್ತಿಸಿರುವ ಶಿಷ್ಟತೆಯನ್ನು ಸಂಪೂರ್ಣವಾಗಿ ಅನುಸರಿಸಿರುವ ತಂತ್ರಾಂಶವನ್ನು ಒದಗಿಸಬೇಕು.
2) ದ್ವಿಭಾಷ ಕನ್ನಡ ತಂತ್ರಾಂಶದ ಜೊತೆಗೆ, ದ್ವಿಭಾಷ ಅಕ್ಷರ ಭಾಗಗಳು (ಗ್ಲಿಫ್) ಮತ್ತು ಸಂಕೇತದ ಮೂಲಕ ಸಿದ್ದಪಡಿಸಿದ ಪಠ್ಯ, ದತ್ತಾಂಶಗಳನ್ನು ಏಕಭಾಷ ಅಕ್ಷರ ರೂಪಗಳಿಗೆ ಪರಿವರ್ತಿಸಬಹುದಾದ ಸಾಧನವನ್ನು ನೀಡಬೇಕು ಹಾಗೂ ಹಾಗೆ ಪರಿವರ್ತಿಸಲ್ಪಟ್ಟ ಏಕಭಾಷ ಅಕ್ಷರ ರೂಪದ, ಅಕ್ಷರ ಭಾಗಗಳ(ಗ್ಲಿಫ್) ಮತ್ತು ಸಂಕೇತವು ಸರ್ಕಾರವು ದಿನಾಂಕ 19.05.2000ರ ಆದೇಶದಲ್ಲಿನ ಶಿಷ್ಟತೆಗೆ ಅನುಗುಣವಾಗಿರಬೇಕು.
3) ಈ ಹಿಂದೆ ದ್ವಿಭಾಷಾ ಅಕ್ಷರ ರೂಪಗಳುಳ್ಳ ತಂತ್ರಾಂಶ ಕುರಿತು ಹೊರಡಿಸಿರುವ ಅಧಿಸೂಚನೆ/ಗಳು ಈ ಅಧಿಸೂಚನೆ ಜಾರಿಗೆ ಬಂದ ತಕ್ಷಣದಿಂದ ರದ್ದಾಗುತ್ತದೆ/ವೆ.
4) ಕನ್ನಡ ಲಿಪಿ ತಂತ್ರಾಂಶದ ತಯಾರಕರು, ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವ ಶಿಷ್ಟ ಮತ್ತು ಏಕ ರೂಪ ಕನ್ನಡ ಅಕ್ಷರಭಾಗಗಳು ಮತ್ತು American Standard Code for Information Interchange (ASCII) ಸಂಕೇತಗಳನ್ನೇ ಬಳಸತಕ್ಕದ್ದು.
5) ಈ ಮೇಲೆ ಹೇಳಲಾದ ಎಲ್ಲಾ ನಿಬಂಧನೆಗಳನುಸಾರ ಸಿದ್ದಪಡಿಸಲಾದ ಕನ್ನಡ ತಂತ್ರಾಂಶಗಳನ್ನು ಮಾತ್ರ ಸರ್ಕಾರದ ಮಾನ್ಯತೆ ಪಡೆದ ಅಧಿಕೃತ ತಂತ್ರಾಂಶಗಳ/ತಂತ್ರಾಂಶ ತಯಾರಕರ/ತಂತ್ರಾಂಶ ಮಾರಾಟಗಾರರ ಪಟ್ಟಿಯಲ್ಲಿರಬೇಕು.
6) ಕರ್ನಾಟಕ ಸರ್ಕಾರದ ಎಲ್ಲಾ ಇಲಾಖೆಗಳು, ಕರ್ನಾಟಕ ಸರ್ಕಾರದ ಸ್ವಾಮ್ಯಕ್ಕೆ ಸೇರಿದ ನಿಗಮಗಳು, ಮಂಡಳಿಗಳು, ಪ್ರಾಧಿಕಾರಗಳು, ವಿಶ್ವವಿದ್ಯಾನಿಲಯಗಳು, ವಿದ್ಯಾಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳು, ಅನುದಾನಿತ ಸಂಸ್ಥೆಗಳು ಈ ನಿಬಂಧನೆಗಳಿಗೆ ಒಳಪಟ್ಟು ಪ್ರಮಾಣೀಕೃತವಾದ ಕನ್ನಡ ಲಿಪಿ ತಂತ್ರಾಂಶಗಳನ್ನು ಮಾತ್ರ ಬಳಸಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

Standards for Kannada in Computers prescribed by the
Government of Karnataka
Glyphs and Glyph codes (ASCII)
(ASCII - American Standard Code for Information Interchange
**ಮಾಹಿತಿ ವಿನಿಮಯಕ್ಕೆ ಅಮೆರಿಕದ ಶಿಷ್ಟ ಸಂಕೇತಗಳು**

| ASCII codes | Standard Glyphs proposed by the Government for Kannada (Bilingual) |
|---|---|
| 32 | Space |
| 33 | ! |
| 34 | " |
| 35 | # |
| 36 | $ |
| 37 | % |
| 38 | & |
| 39 | ' |
| 40 | ( |
| 41 | ) |
| 42 | * |
| 43 | + |
| 44 | , |

| ASCII codes | Standard Glyphs proposed by the Government for Kannada (Bilingual) |
|---|---|
| 45 | - |
| 46 | . |
| 47 | / |
| 48 | 0 |
| 49 | 1 |
| 50 | 2 |
| 51 | 3 |
| 52 | 4 |
| 53 | 5 |
| 54 | 6 |
| 55 | 7 |
| 56 | 8 |
| 57 | 9 |
| 58 | : |
| 59 | ; |
| 60 | < |
| 61 | = |
| 62 | > |
| 63 | ? |
| 64 | @ |
| 65 | A |
| 66 | B |
| 67 | C |
| 68 | D |
| 69 | E |
| 70 | F |
| 71 | G |
| 72 | H |
| 73 | I |
| 74 | J |
| 75 | K |
| 76 | L |
| 77 | M |
| 78 | N |
| 79 | O |
| 80 | P |
| 81 | Q |
| 82 | R |
| 83 | S |
| 84 | T |
| 85 | U |
| 86 | V |
| 87 | W |
| 88 | X |

| ASCII codes | Standard Glyphs proposed by the Government for Kannada (Bilingual) |
|---|---|
| 89 | Y |
| 90 | Z |
| 91 | [ |
| 92 | \ |
| 93 | ] |
| 94 | ^ |
| 95 | _ |
| 96 | ` |
| 97 | a |
| 98 | b |
| 99 | c |
| 100 | d |
| 101 | e |
| 102 | f |
| 103 | g |
| 104 | h |
| 105 | i |
| 106 | j |
| 107 | k |
| 108 | l |
| 109 | m |
| 110 | n |
| 111 | o |
| 112 | p |
| 113 | q |
| 114 | r |
| 115 | s |
| 116 | t |
| 117 | u |
| 118 | v |
| 119 | w |
| 120 | x |
| 121 | y |
| 122 | z |
| 123 | { |
| 124 | \| |
| 125 | } |
| 126 | ~ |
| 127 | Not used |
| 128 | |
| 129 | ಂ |
| 130 | ಃ |
| 131 | ಅ |
| 132 | ಆ |

| ASCII codes | Standard Glyphs proposed by the Government for Kannada (Bilingual) |
|---|---|
| 133 | ಇ |
| 134 | ಈ |
| 135 | ಉ |
| 136 | ಊ |
| 137 | ಋ |
| 138 | ಎ |
| 139 | ಏ |
| 140 | ಐ |
| 141 | ಒ |
| 142 | ಓ |
| 143 | Not used |
| 144 | ಔ |
| 145 | ಕ |
| 146 | ಕಿ |
| 147 | ಖ |
| 148 | ಖ |
| 149 | ಖಿ |
| 150 | ಗ |
| 151 | ಗಿ |
| 152 | ಘ |
| 153 | ಘಿ |
| 154 | ಚ |
| 155 | ಚ |
| 156 | ಚಿ |
| 157 | ಛ |
| 158 | |
| 159 | ಛಿ |
| 160 | |
| 161 | ಜ |
| 162 | ಜ |
| 163 | ಜಿ |
| 164 | ೦ |
| 165 | ೃ |
| 166 | ು |
| 167 | ೦ಿ |
| 168 | ಞ |
| 169 | ಟ |
| 170 | ಟ |
| 171 | ಟಿ |
| 172 | ಠ |
| 173 | ಠಿ |
| 174 | ಡ |
| 175 | ಡಿ |
| 176 | ़ |

| ASCII codes | Standard Glyphs proposed by the Government for Kannada (Bilingual) |
|---|---|
| 177 | ಣ |
| 178 | ಣ |
| 179 | ತ |
| 180 | ತಿ |
| 181 | ಥ |
| 182 | ಥಿ |
| 183 | ದ |
| 184 | ದಿ |
| 185 | ನ |
| 186 | ನಿ |
| 187 | ಪ |
| 188 | ಪಿ |
| 189 | ಬ |
| 190 | ಬ |
| 191 | ಬಿ |
| 192 | ವ |
| 193 | ವಿ |
| 194 | ಯಿ |
| 195 | ಲ |
| 196 | ಲ |
| 197 | ಲಿ |
| 198 | ಶ |
| 199 | ಶಿ |
| 200 | ಷ |
| 201 | ಷಿ |
| 202 | ಸ |
| 203 | ಸಿ |
| 204 | ಹ |
| 205 | ಹಿ |
| 206 | ಳ |
| 207 | ಳಿ |
| 208 | ್ |
| 209 | ಾ |
| 210 | ೖ |
| 211 | ೆ |
| 212 | ು |
| 213 | ು |
| 214 | ೂ |
| 215 | ೂ |
| 216 | ್ಲ |
| 217 | ೖ |
| 218 | ್ಡ |
| 219 | ೌ |
| 220 | ್ಕ |

| ASCII codes | Standard Glyphs proposed by the Government for Kannada (Bilingual) |
|---|---|
| 221 | ಖ |
| 222 | ∩ |
| 223 | ಘ |
| 224 | ಚ |
| 225 | ಛ |
| 226 | ಜ |
| 227 | ಝ |
| 228 | ಞ |
| 229 | ಟ |
| 230 | ಠ |
| 231 | ಡ |
| 232 | ಢ |
| 233 | ಣ |
| 234 | ತ |
| 235 | ಥ |
| 236 | ದ |
| 237 | ಧ |
| 238 | ನ |
| 239 | ಪ |
| 240 | ಫ |
| 241 | ಬ |
| 242 | ಭ |
| 243 | ಮ |
| 244 | ಯ |
| 245 | ◡ |
| 246 | ಲ |
| 247 | ವ |
| 248 | ಶ |
| 249 | ಷ |
| 250 | ~ |
| 251 | ಹ |
| 252 | ಳ |
| 253 | ೆ |
| 254 | ೯ |
| 255 | small white space |

**Note:** For Kannada numerals a separate font can be provided which replace English numerals with ASCII codes 48 to 57.

ಎಂ.ಕೆ. ಭರ್ಮರಾಜಪ್ಪ
ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

ಪಿ.ಆರ್.785

**ವಿಷಯ:** ಪ್ರಾದೇಶಿಕ ಪತ್ರಗಾರ ಕಛೇರಿ, ಧಾರವಾಡ ಇಲ್ಲಿಗೆ ಒಂದು ಮೋದಿ ಜೆರಾಕ್ಸ್ ಯಂತ್ರ (WC 5638)ನ್ನು ಬೈಬ್ಯಾಕ್ ಆಧಾರದಲ್ಲಿ ಖರೀದಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ ಅವರ ಪತ್ರ ಸಂಖ್ಯೆ: ಎಆರ್ಎಸ್ 25 ಎಡಿಎಂ 2008, ದಿನಾಂಕ 06–10–2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿ: 06–10–08ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ರಾಜ್ಯ ಪತ್ರಗಾರ ಇಲಾಖೆ ಅವರು ಧಾರವಾಡ ವಿಭಾಗೀಯ ಪತ್ರಗಾರ ಕಛೇರಿಯಲ್ಲಿರುವ ಜೆರಾಕ್ಸ್ ಯಂತ್ರವು ಪದೇಪದೇ ಕೆಟ್ಟು ಹೋಗುತ್ತಿರುವುದರಿಂದ, ಇದರಿಂದ ತೆಗೆದ ದಾಖಲೆಯ ಪ್ರತಿಗಳು ಸರಿಯಾಗಿ ಬರುತ್ತಿಲ್ಲವಾದುದರಿಂದ ಒಂದು ಹೊಸ ಮೋದಿ ಜೆರಾಕ್ಸ್ ಯಂತ್ರ (ಮಾದರಿ WC 5638)ವನ್ನು ಬೈಬ್ಯಾಕ್ ಆಧಾರದಲ್ಲಿ ಮೆ: ಅಕುರ ಸಲ್ಯೂಷನ್ಸ್, ಬೆಂಗಳೂರು ಇವರಿಂದ DGS&D ನಿಂದ ಅಂಗೀಕೃತ ದರಪಟ್ಟಿಯನ್ವಯ ಅಂದಾಜು ರೂ.2,59,230.00 ಗಳನ್ನು (ಎಲ್ಲಾ ತೆರಿಗೆಗಳು ಸೇರಿ) ವೆಚ್ಚದಲ್ಲಿ ಖರೀದಿಸಲು ಸರ್ಕಾರದ ಅನುಮತಿ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 13 ರಾಪಸಿ 2008, ಬೆಂಗಳೂರು, ದಿನಾಂಕ: 3ನೇ ಜನವರಿ 2009**

ವಿಭಾಗೀಯ ಪತ್ರಗಾರ ಕಛೇರಿ, ಧಾರವಾಡ ಇಲ್ಲಿ ಕೆಟ್ಟುಹೋಗಿರುವ ಜೆರ್‍ಯಾಕ್ಸ್ ಯಂತ್ರ ಬದಲಾಗಿ DGS&Dನಿಂದ ಅಂಗೀಕೃತ ದರಪಟ್ಟಿಯನ್ವಯ ರೂ.2,59,230.00 (ಎಲ್ಲಾ ತೆರಿಗೆಗಳು ಸೇರಿ) (ರೂಪಾಯಿ ಎರಡು ಲಕ್ಷದ ಐವತ್ತೊಂಬತ್ತು ಸಾವಿರದ ಇನ್ನೂರ ಮೂವತ್ತುಗಳು ಮಾತ್ರ) ಗಳ ವೆಚ್ಚದಲ್ಲಿ ಬೈಬ್ಯಾಕ್ ಆಧಾರದಲ್ಲಿ ಮೆ: ಅಕುರ ಸಲ್ಯೂಷನ್ಸ್, ಬೆಂಗಳೂರು ಇವರಿಂದ ಹೊಸ ಜೆರಾಕ್ಸ್ ಯಂತ್ರವನ್ನು (WC 5638 ಮಾದರಿ) ಖರೀದಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ ಇವರಿಗೆ ಪಾರದರ್ಶಕತೆ ಅಧಿನಿಯಮ 1999 ಹಾಗೂ ಅದರ ನಿಯಮಗಳು 2000ನ್ನು ಅನುಸರಿಸುವ ಷರತ್ತಿಗೆ ಒಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ.

ಈ ವೆಚ್ಚವನ್ನು ರಾಜ್ಯ ಪತ್ರಗಾರ ಇಲಾಖೆಯ 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2205–104–01–051 (ಸಾಮಾನ್ಯ ವೆಚ್ಚಗಳು) (ಯೋಜನೇತರ) ಅಡಿ ಭರಿಸತಕ್ಕದ್ದು. ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ: ಇಡಿ 1501 ಐಎಫ್(ಬಿಎ) 2008 ದಿ: 02–12–2008ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.295

**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಶ್ರೀ ಕೆ. ಕೃಷ್ಣಾಚಾರ್, ಸಹಾಯಕ ಪತ್ರಪಾಲಕರು ರವರಿಗೆ ನೀಡಿದ ಪತ್ರಪಾಲಕರ ಹುದ್ದೆಯ ಮುಂಬಡ್ತಿಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ:**
1. ಅಧಿಸೂಚನೆ ಸಂಖ್ಯೆ ಕಸಂವಾಪ್ರ 1 ರಾಪಸಿ 2008 ದಿ: 12.08.2008.
2. ಶ್ರೀ ಕೆ. ಕೃಷ್ಣಾಚಾರ್, ಸಹಾಯಕ ಪತ್ರಪಾಲಕರು, ಇವರ ಮನವಿ ದಿ: 16–8–2008.
3. ನಿರ್ದೇಶಕರು, ರಾಜ್ಯ ಪತ್ರಗಾರ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ ಎ.ಆರ್.ಎಸ್ 16 ಇಎಸ್.ಟಿ 95(ಭಾಗ) ದಿನಾಂಕ 19–08–08.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಶ್ರೀ ಕೆ. ಕೃಷ್ಣಾಚಾರ್, ಸಹಾಯಕ ಪತ್ರಪಾಲಕರು, ಇವರಿಗೆ ವೇತನ ಶ್ರೇಣಿ ರೂ.14,050–25,020ರ ಗ್ರೂಪ್ 'ಎ' ವೃಂದದ ಪತ್ರಪಾಲಕರ ಹುದ್ದೆಗೆ ಮುಂಬಡ್ತಿಯನ್ನು ನೀಡಿ ವಿಭಾಗೀಯ ಕಛೇರಿ ಧಾರವಾಡ ಇಲ್ಲಿ ಖಾಲಿ ಇರುವ ಪತ್ರಪಾಲಕರ ಹುದ್ದೆಗೆ ನೇಮಿಸಲಾಗಿತ್ತು.

ಶ್ರೀ ಕೆ. ಕೃಷ್ಣಾಚಾರ್ ರವರು ಮೇಲೆ ಓದಲಾದ (2)ರ ತಮ್ಮ ಮನವಿ ದಿ: 16–8–08 ರಲ್ಲಿ ತಮಗೆ 57 ವರ್ಷಗಳಾಗಿದ್ದು, ಕೆಲವು ವರ್ಷಗಳಿಂದ ಅತಿಯಾದ ರಕ್ತದೊತ್ತಡ/ಹೃದಯಬೇನೆಯಿಂದ ನರಳುತ್ತಿದ್ದು, ಬೆಂಗಳೂರಿನಲ್ಲಿರುವ ನರ್ಸಿಂಗ್ ಹೋಂ ಗಳಲ್ಲಿ ಆಗಾಗ ಚಿಕಿತ್ಸೆ ಪಡೆಯುತ್ತಿದ್ದೇನೆಂದು ಇದರ ಜೊತೆಗೆ ಕೆಲವು ಕೌಟುಂಬಿಕ ಸಮಸ್ಯೆಗಳನ್ನೂ ಸಹ ಎದುರಿಸುತ್ತಿದ್ದೇನೆಂದು, ಈ ಪರಿಸ್ಥಿತಿಯಲ್ಲಿ ನಾನು ಮುಂಬಡ್ತಿ ಹೊಂದಿ ಸ್ಥಳ ನಿಯುಕ್ತಿಗೊಂಡಿರುವ ಧಾರವಾಡ, ವಿಭಾಗೀಯ ಕಛೇರಿಯಲ್ಲಿ ಗ್ರೂಪ್–ಎ ವೃಂದದ ಪತ್ರಪಾಲಕರ ಹುದ್ದೆಯಲ್ಲಿ ಹಾಜರಾಗಿ ಸೇವೆ ಸಲ್ಲಿಸುವುದು ಸಧ್ಯಕ್ಕೆ ಕಷ್ಟಸಾಧ್ಯವಾಗಿರುತ್ತದೆಂದು ತಿಳಿಸಿ ನೀಡಿರುವ ಮುಂಬಡ್ತಿಯನ್ನು ಒಪ್ಪಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಅದನ್ನು ನಿರಾಕರಿಸಲು ಇಚ್ಛಿಸಿರುತ್ತಾರೆ. ಮುಂಬಡ್ತಿ ನಿರಾಕರಣೆಯನ್ನು ಒಪ್ಪಿಕೊಂಡು ಹಾಲಿ ಬೆಂಗಳೂರು ಕೇಂದ್ರ ಕಛೇರಿಯಲ್ಲಿರುವ ಸಹಾಯಕ ಪತ್ರಪಾಲಕರ ಹುದ್ದೆಯಲ್ಲಿ ಮುಂದುವರಿಸಲು ಕೋರಿರುತ್ತಾರೆ. ಮೇಲೆ ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು, ಅವರ ಮನವಿಯನ್ನು ಲಗತ್ತಿಸಿ, ಸರ್ಕಾರದಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 23 ರಾಪಸಿ 2008, ಬೆಂಗಳೂರು, ದಿನಾಂಕ 18ನೇ ಡಿಸೆಂಬರ್ 2008**

ಮೇಲಿನ ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಕೆ. ಕೃಷ್ಣಾಚಾರ್ ಸಹಾಯಕ ಪತ್ರಪಾಲಕರು ಇವರಿಗೆ ಸರ್ಕಾರದ ಅಧಿಸೂಚನೆ ಸಂಖ್ಯೆ ಕಸಂವಾಪ್ರ 1 ರಾಪಸಿ 08 ದಿನಾಂಕ 12.08.2008 ರಲ್ಲಿ ಪತ್ರಪಾಲಕರ ಹುದ್ದೆಗೆ ನೀಡಿದ ಸ್ಥಾನಪನ್ನ ಮುಂಬಡ್ತಿಯನ್ನು ಕರ್ನಾಟಕ ನಾಗರೀಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು, 1977ರ ನಿಯಮ 4(ಎ)ರನ್ವಯ ದಿ: 12–8–2008 ರಿಂದಲೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.146

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಬೆಳಗಾಂ ಜಿಲ್ಲೆ, ಖಾನಾಪುರ ತಾಲೂಕಿಗೆ ಸೇರಿದ ನಂದಗಡ ಗ್ರಾಮದಲ್ಲಿ ಸಂಗೊಳ್ಳಿರಾಯಣ್ಣ ಸ್ಮಾರಕ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ: ಕಸನಿ 76 ಸ್ಮಾರಕ 1999–2000, ದಿ: 07–07–2008
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ: ಕಸನಿ 76 ಸ್ಮಾರಕ 1999–2000, ದಿ: 02–09–2008

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ 07–07–2008ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಬೆಳಗಾಂ ಜಿಲ್ಲೆ ಅವರು ಬೆಳಗಾಂ ಜಿಲ್ಲೆ, ಖಾನಾಪುರ ತಾಲೂಕಿಗೆ ಸೇರಿದ ನಂದಗಡ ಗ್ರಾಮದಲ್ಲಿ ಸಂಗೊಳ್ಳಿರಾಯಣ್ಣ ಸ್ಮಾರಕ ಅಭಿವೃದ್ಧಿಗೆ 100.00 ಲಕ್ಷಗಳನ್ನು ಆದ್ಯತೆ ಮೇಲೆ ಬಿಡುಗಡೆ ಮಾಡಲು ಕೋರಿರುತ್ತಾರೆಂದು ತಿಳಿಸುತ್ತಾ, ಪ್ರಸ್ತಾವನೆಯನ್ನು ಪರಿಶೀಲಿಸಿ ಪ್ರಸಕ್ತ ಸಾಲಿನಲ್ಲಿ ರೂ.25.00 ಲಕ್ಷದ ಅನುದಾನವನ್ನು ನೀಡಲು ಸರ್ಕಾರದ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ 02–09–2008ರ ಪತ್ರದಲ್ಲಿ 2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯಮುಖ್ಯಮಂತ್ರಿಯವರು ಈ ಯೋಜನೆಗೆ 100.00 ಲಕ್ಷಗಳ ಅನುದಾನ ಘೋಷಿಸಿದ್ದು ಆಯವ್ಯಯದಲ್ಲಿ ಒದಗಿಸಿರುವುದಿಲ್ಲ. ಆದುದರಿಂದ ಈ ಹಣವನ್ನು ಲೆಕ್ಕಶೀರ್ಷಿಕೆ "2205–00–102–4–03–100 ಯೋಜನೆ ಜಿಲ್ಲಾ ರಂಗಮಂದಿರಗಳಿಗೆ ಧನಸಹಾಯ" ದಡಿ ಒದಗಿಸಿ ಜಿಲ್ಲಾಧಿಕಾರಿಗಳು ಬೆಳಗಾಂ ಜಿಲ್ಲೆ ಇವರಿಗೆ ಬಿಡುಗಡೆ ಮಾಡಬಹುದೆಂದು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 24 ಸ್ಮಾಪ್ರನಿ 2008, ಬೆಂಗಳೂರು, ದಿನಾಂಕ: 15ನೇ ಜನವರಿ 2009**

ಬೆಳಗಾಂ ಜಿಲ್ಲೆ, ಖಾನಾಪುರ ತಾಲೂಕಿಗೆ ಸೇರಿದ ನಂದಗಡ ಗ್ರಾಮದಲ್ಲಿ ಸಂಗೊಳ್ಳಿರಾಯಣ್ಣ ಸ್ಮಾರಕ ನಿರ್ಮಿಸುವುದಕ್ಕಾಗಿ ರೂ.25.00 ಲಕ್ಷಗಳನ್ನು (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ, ಬೆಳಗಾಂ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಸರ್ಕಾರದ ಮಂಜೂರಾತಿ ನೀಡಲಾಗಿದೆ ಹಾಗೂ ಬೆಳಗಾಂ ಜಿಲ್ಲಾಡಳಿತದವರು ಈ ಯೋಜನೆಯು ಪೂರ್ಣಗೊಳ್ಳುವವರೆಗೆ ಇದರ ಉಸ್ತುವಾರಿಯನ್ನು ನೋಡಿಕೊಳ್ಳುವುದು.

**ಷರತ್ತುಗಳು:**

ಅ) ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಕೆಯಾಗುವಂತೆ ಇಲಾಖೆಯು ನೋಡಿಕೊಳ್ಳತಕ್ಕದ್ದು ಹಾಗೂ ಈ ಯೋಜನೆಯನ್ನು ಕನಿಷ್ಠ 10 ತಿಂಗಳ ಅವಧಿಯೊಳಗೆ ಮುಕ್ತಾಯಗೊಳಿಸಲು ಕ್ರಮ ವಹಿಸತಕ್ಕದ್ದು.

ಆ) ಈ ಸ್ಮಾರಕಕ್ಕೆ ಸಕ್ಷಮ ಪ್ರಾಧಿಕಾರವಾಗಿ ಜಿಲ್ಲಾಧಿಕಾರಿಗಳು, ಬೆಳಗಾಂ ಜಿಲ್ಲೆ, ಬೆಳಗಾಂ ಅವರು ಕರ್ತವ್ಯ ನಿರ್ವಹಿಸತಕ್ಕದ್ದು.

ಇ) ಈ ಕಾಮಗಾರಿಗಳನ್ನು ಕೈಗೊಳ್ಳುವ ಮುನ್ನ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ/ನಿಯಮಗಳಂತೆ ಟೆಂಡರ್ ಪ್ರಕ್ರಿಯೆ ನಡೆಸಿ ಕ್ರಮ ಕೈಗೊಳ್ಳತಕ್ಕದ್ದು.

ಈ) ಈ ಯೋಜನೆಗೆ ಸಂಬಂಧಪಟ್ಟ ಲೋಕೋಪಯೋಗಿ ಇಲಾಖಾ ಅಭಿಯಂತರರಿಂದ ಯೋಜನೆ ನಕ್ಷೆ ಮತ್ತು ಅಂದಾಜನ್ನು ಅನುಮೋದಿಸಿಕೊಳ್ಳತಕ್ಕದ್ದು.

ಉ) ಹಣ ಬಳಕೆಯ ಪ್ರಮಾಣಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ ಅನುದಾನವನ್ನು 2008-09ನೇ ಸಾಲಿನ ಲೆಕ್ಕ ಶೀರ್ಷಿಕೆ 2205-00-102-4-31-059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 2177 ವೆಚ್ಚ-5 2008, ದಿನಾಂಕ: 24-11-08 ಹಾಗೂ ಯೋಜನಾ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಪಿಡಿ 130 ಎಂ&ಇ 2008, ದಿನಾಂಕ: 17-12-08 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.482

ಎಂ.ಕೆ. ಧರ್ಮರಾಜಪ್ಪ

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ).

**ವಿಷಯ:** ಡಾ: ಶಿವರಾಮ ಕಾರಂತರ ಹೆಸರಿನಲ್ಲಿ ಸ್ಮಾರಕ ನಿರ್ಮಿಸಲು ಅನುದಾನ ನೀಡುವ ಬಗ್ಗೆ.

**ಓದಲಾಗಿದೆ:** 1. ಅಧ್ಯಕ್ಷರು, 1ನೇ ಕೋಟ ಕೋಟತಟ್ಟು ಗ್ರಾಮ ಪಂಚಾಯತಿ, ಉಡುಪಿ ಜಿಲ್ಲೆ, ಇವರ ಪತ್ರ ಸಂಖ್ಯೆ: 148/2008-09, ದಿ: 10-10-08

2. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 442 ಬಿಆರ್‌ಎಸ್ 2008, ದಿನಾಂಕ: 24-11-2008

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ಅಧ್ಯಕ್ಷರು, 1ನೇ ಕೋಟ ಕೋಟತಟ್ಟು ಗ್ರಾಮ ಪಂಚಾಯತಿ, ಉಡುಪಿ ಜಿಲ್ಲೆ, ಇವರು ಜ್ಞಾನಪೀಠ ಪ್ರಶಸ್ತಿ ವಿಜೇತ ಕೋಟ ಶಿವರಾಮ ಕಾರಂತರು ಕೋಟತಟ್ಟು ಗ್ರಾಮದಲ್ಲಿ ಹುಟ್ಟಿದ್ದು. ಸದರಿ ಗ್ರಾಮದಲ್ಲಿ ಕಾರಂತರ ಸ್ಮಾರಕ ನಿರ್ಮಿಸಲು 1.00 ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 24-11-2008 ರ ಸರ್ಕಾರದ ಆದೇಶದಲ್ಲಿ 2008-09ನೇ ಸಾಲಿನ ಲೆಕ್ಕಶೀರ್ಷಿಕೆ 2205-00-102-4-31-059 (ಯೋಜನೆ) ಅಡಿ ಈ ಸ್ಮಾರಕ ನಿರ್ಮಾಣಕ್ಕೆ ಹೆಚ್ಚುವರಿ ರೂ. 1.00 ಕೋಟಿ ಅನುದಾನವನ್ನು ಒದಗಿಸಿದ್ದು, ಈ ಮೊತ್ತವನ್ನು ಪ್ರಸಕ್ತ ಆರ್ಥಿಕ ವರ್ಷದ ಅಂತ್ಯದೊಳಗಿನ ಒಟ್ಟಾರೆ ಉಳಿತಾಯ/ ಪೂರಕ ಅಂದಾಜುಗಳ ಪುನರ್ ವಿನಿಯೋಗದಿಂದ ಭರಿಸಬಹುದೆಂದು ತಿಳಿಸಲಾಗಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 37 ಸ್ಮಾಪ್ರನಿ 2008, ಬೆಂಗಳೂರು, ದಿನಾಂಕ: 19ನೇ ಡಿಸೆಂಬರ್ 2008**

ಉಡುಪಿ ಜಿಲ್ಲೆಯ, ಕೋಟತಟ್ಟು ಗ್ರಾಮದಲ್ಲಿ ಡಾ: ಶಿವರಾಮ ಕಾರಂತರ ಸ್ಮಾರಕ ಮತ್ತು ರಂಗಮಂದಿರ ನಿರ್ಮಾಣ ಮಾಡಲು, ಮೇಲೆ ಓದಲಾದ (2)ರ ಆದೇಶದಲ್ಲಿ ಹೆಚ್ಚುವರಿಯಾಗಿ ಒದಗಿಸಿರುವ ರೂ. 1.00 ಕೋಟಿ (ಒಂದು ಕೋಟಿ ರೂಪಾಯಿಗಳು ಮಾತ್ರ) ಗಳನ್ನು ಜಿಲ್ಲಾಧಿಕಾರಿಗಳು, ಉಡುಪಿ ಜಿಲ್ಲೆ, ಉಡುಪಿ, ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಸರ್ಕಾರದ ಮಂಜೂರಾತಿ ನೀಡಲಾಗಿದೆ ಹಾಗೂ ಉಡುಪಿ ಜಿಲ್ಲಾಡಳಿತದವರು ಈ ಯೋಜನೆಯು ಪೂರ್ಣಗೊಳ್ಳುವವರೆಗೆ ಇದರ ಉಸ್ತುವಾರಿಯನ್ನು ನೋಡಿಕೊಳ್ಳುವುದು.

**ಷರತ್ತುಗಳು:**

ಅ) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999ರ ಪ್ರಕಾರ ಕ್ರಮ ವಹಿಸುವುದು

ಆ) ಈ ಯೋಜನೆಗೆ ಸಂಬಂಧಪಟ್ಟ ಲೋಕೋಪಯೋಗಿ ಇಲಾಖಾ ಅಭಿಯಂತರರಿಂದ ಯೋಜನೆ ನಕ್ಷೆ ಮತ್ತು ಅಂದಾಜನ್ನು ಅನುಮೋದಿಸಿಕೊಳ್ಳತಕ್ಕದ್ದು.

ಇ) ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಕೆಯಾಗುವಂತೆ ಇಲಾಖೆಯು ನೋಡಿಕೊಳ್ಳತಕ್ಕದ್ದು ಹಾಗೂ ಈ ಯೋಜನೆಯನ್ನು ಕನಿಷ್ಟ 10 ತಿಂಗಳ ಅವಧಿಯೊಳಗೆ ಮುಕ್ತಾಯಗೊಳಿಸಲು ಕ್ರಮ ವಹಿಸತಕ್ಕದ್ದು.

ಈ) ಒಂದೇ ಬಾರಿಗೆ ಈ ಅನುದಾನ ಮೊತ್ತವಾಗಿದ್ದು, ಈ ಸ್ಮಾರಕ ರಂಗಮಂದಿರದ ಸಕ್ಷಮ ಪ್ರಾಧಿಕಾರವಾಗಿ ಕೋಟತಟ್ಟು ಗ್ರಾಮ ಪಂಚಾಯತ್ ಉಡುಪಿ ಜಿಲ್ಲೆರವರು ನಿರ್ವಹಿಸತಕ್ಕದ್ದು ಹಾಗೂ ಈ ಯೋಜನೆಗೆ

ಮುಂಬರುವ ಖರ್ಚು ವೆಚ್ಚಗಳನ್ನು ಕೋಟತಟ್ಟು ಗ್ರಾಮ ಪಂಚಾಯತ್ ಉಡುಪಿ ಜಿಲ್ಲೆ ಅವರೇ ಭರಿಸತಕ್ಕದ್ದು.

ಉ) ಹಣ ಬಳಕೆಯ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

ಈ ಮೊತ್ತವನ್ನು 2008–09ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–102–4–31–059 (ಯೋಜನೆ) ಅಡಿಯಲ್ಲಿ ಹೆಚ್ಚುವರಿ ಅನುದಾನದಡಿ ಬಿಡುಗಡೆ ಮಾಡಿದೆ.

ಈ ಹೆಚ್ಚುವರಿ ಅನುದಾನವನ್ನು ಪ್ರಸಕ್ತ ಆರ್ಥಿಕ ವರ್ಷದ ಅಂತ್ಯದೊಳಗಿನ ಒಟ್ಟಾರೆ ಉಳಿತಾಯ/ ಪೂರಕ ಅಂದಾಜುಗಳ ಮುನರ್ ವಿನಿಯೋಗದಿಂದ ಭರಿಸಿ, ಅನುದಾನ ಸಂಖ್ಯೆಯ 25ರಡಿ ಕ್ರಮಬದ್ಧಗೊಳಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 2409 ವೆಚ್ಚ–5 2008, ದಿನಾಂಕ: 25–11–08 ಹಾಗೂ ಯೋಜನಾ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಪಿಡಿ 128 ಎಂಇ 2008, ದಿನಾಂಕ: 04–12–08 ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.145

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಬೀದರ್ ಜಿಲ್ಲೆ ಔರಾದ್ ತಾಲ್ಲೂಕು ಕಮಲಾನಗರದಲ್ಲಿ ಶ್ರೀ ಲಿಂಗೈಕ್ಯ ಚನ್ನಬಸವ ಪಟ್ಟದೇವರು ಇವರ ಹೆಸರಿನಲ್ಲಿ ಸ್ಮಾರಕ ಭವನ ನಿರ್ಮಾಣಕ್ಕೆ ಅನುದಾನ ಕೋರಿ.

**ಓದಲಾಗಿದೆ:**

1. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ 2 ಸ್ಮಾರಕ 2006–07, ದಿನಾಂಕ 27.06.2008.
2. ಸರ್ಕಾರದ ಪತ್ರ ಸಂಖ್ಯೆ: ಕಸಂವಾಪ್ರ 18 ಸ್ಮಾಪ್ರನಿ 08 ದಿ:30.10.2008.
3. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ 2 ಸ್ಮಾರಕ 2006–07, ದಿನಾಂಕ 26.11.2008.

**ಪ್ರಸ್ತಾವನೆ:**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆರವರು ಮೇಲೆ(1) ರಲ್ಲಿ ಓದಲಾದ ದಿನಾಂಕ 27.06.2008ರ ಪತ್ರದಲ್ಲಿ ಶ್ರೀ ಲಿಂಗೈಕ್ಯ ಚನ್ನಬಸವ ಪಟ್ಟದೇವರು ಗಡಿನಾಡಿನಲ್ಲಿ ಕನ್ನಡದ ಉಳಿವಿಗಾಗಿ ಶ್ರಮಿಸಿದ್ದು, ಕರ್ನಾಟಕದ ಏಕೀಕರಣಕ್ಕಾಗಿ ಹೋರಾಡಿ ಬೀದರ್ ಜಿಲ್ಲೆಯು ಕರ್ನಾಟಕದಲ್ಲಿ ಉಳಿಯುವಂತೆ ಮಾಡಿರುತ್ತಾರೆಂದು ಇವರು ಕನ್ನಡಪರ ಕಾರ್ಯ ಮಾಡಿರುವುದರಿಂದ ಇವರು ಕರ್ನಾಟಕದ ಮಹಾಪುರುಷರಲ್ಲಿ ಒಬ್ಬರಾಗಿ ಗುರುತಿಸಲ್ಪಟ್ಟಿದ್ದು, ಇವರ ನೆನಪಿನಲ್ಲಿ ಸ್ಮಾರಕ ಭವನ ನಿರ್ಮಾಣ ಮಾಡುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ. ಈ ಯೋಜನೆಗೆ 2008–09 ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–31–059ರ ಅಡಿ ರೂ.50.00 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ದಿ: 30.10.2008ರ ಪತ್ರದಲ್ಲಿ ಈ ಯೋಜನೆಗೆ ಕೆಲಸ ಪ್ರಾರಂಭಿಸಲು ಮಾನ್ಯ ಮುಖ್ಯಮಂತ್ರಿಯವರು ಸೂಚಿಸಿರುವುದರಿಂದ ಇಲಾಖೆಯ ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ) ಅಡಿಯಲ್ಲಿ ಒದಗಿಸಿರುವ ರೂ.20.00 ಕೋಟಿಯಲ್ಲಿ ಈ ಕಾಮಗಾರಿಗೆ ಹಣ ಹಂಚಿಕೆ ಮಾಡಿ ಕ್ರಿಯಾಯೋಜನೆಯಲ್ಲಿ ಅನುಮೋದಿಸಿಕೊಂಡು ನಿಯಮಾನುಸಾರ ಕಾಮಗಾರಿಯನ್ನು ಕೈಗೊಳ್ಳಬೇಕೆಂದು ತಿಳಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆರವರು ಮೇಲೆ ಓದಲಾದ ದಿನಾಂಕ 26.11.2008ರ ಪತ್ರದಲ್ಲಿ ಈ ಕಾಮಗಾರಿಗೆ ಜಿಲ್ಲಾ ರಂಗಮಂದಿರದ ನಿರ್ವಹಣೆಯ ಲೆಕ್ಕಶೀರ್ಷಿಕೆ 2205–00–102–4–03–100 (ಯೋಜನೆ) ರಡಿ ಉಳಿದಿರುವ ಮೊತ್ತ ರೂ.107.00 ಲಕ್ಷಗಳಲ್ಲಿ ರೂ.50.00 ಲಕ್ಷಗಳನ್ನು ಬಿಡುಗಡೆ ಮಾಡಬಹುದೆಂದು ತಿಳಿಸಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 18 ಸ್ಮಾಪ್ರನಿ 2008, ಬೆಂಗಳೂರು, ದಿನಾಂಕ 31ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಔರಾದ್ ತಾಲ್ಲೂಕು ಕಮಲಾನಗರದಲ್ಲಿ ಶ್ರೀ ಲಿಂಗೈಕ್ಯ ಚನ್ನಬಸವ ಪಟ್ಟದೇವರು ಇವರ ಹೆಸರಿನಲ್ಲಿ ಸ್ಮಾರಕ ಭವನ ನಿರ್ಮಾಣಕ್ಕೆ ರೂ.50.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಬೀದರ್

ಜಿಲ್ಲೆ, ಬೀದರ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಹಾಗೂ ಬೀದರ್ ಜಿಲ್ಲಾಡಳಿತದವರು ಈ ಯೋಜನೆ ಪೂರ್ಣಗೊಳ್ಳುವವರೆಗೆ ಇದರ ಉಸ್ತುವಾರಿ ನೋಡಿಕೊಳ್ಳುವುದು.

**ಷರತ್ತುಗಳು:**

ಅ) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ನಿಯಮಗಳು 2000ರ ಪ್ರಕಾರ ಕ್ರಮ ವಹಿಸುವುದು

ಆ) ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಕೆಯಾಗುವಂತೆ ಇಲಾಖೆಯು ನೋಡಿಕೊಳ್ಳತಕ್ಕದ್ದು ಹಾಗೂ ಈ ಯೋಜನೆಯನ್ನು ಕನಿಷ್ಟ ಅವಧಿಯೊಳಗೆ ಮುಕ್ತಾಯಗೊಳಿಸಿ ತತ್ಸಂಬಂಧ ಹಣ ಬಳಕೆಯ ಪ್ರಮಾಣಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವುದು.

ಇ) ಜಿಲ್ಲಾಧಿಕಾರಿಗಳ ಸಮಿತಿ ಉಸ್ತುವಾರಿ ಮಾಡುವುದು

ಈ ಮೊತ್ತವನ್ನು 2008–09ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–102–4–03–100 (ಯೋಜನೆ) ಅಡಿಯಲ್ಲಿನ ಅನುದಾನದಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಇಡಿ 113 ಐಎಫ್(ಬಿಎ) 2009, ದಿನಾಂಕ 23.01.2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.578

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಶ್ರೀ ಎಂ. ಮಾದೇಗೌಡ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಅಮಾನತ್ತಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 28 ಕಸನಿ 97(ಭಾ) ದಿನಾಂಕ 19.4.1997.
2. ಮೈಸೂರು ಜಿಲ್ಲಾ ಮತ್ತು ಸತ್ರ ನ್ಯಾಯಾಲಯದಲ್ಲಿನ ಪ್ರಕರಣ ಸಂಖ್ಯೆ: 248/97 ಮತ್ತು 127/98ರಲ್ಲಿ ದಿನಾಂಕ 18.4.2006ರಂದು ನೀಡಿರುವ ತೀರ್ಪು.
3. ಪತ್ರ ಸಂಖ್ಯೆ: ಹೆಚ್‌ಡಿ 6207 ಸಿಪಿ2/06 ದಿನಾಂಕ 28.8.2006.
4. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಕಸನಿ:7: ಸಿಬ್ಬಂದಿ:2:1997–98 ದಿನಾಂಕ 21.07.2008

**ಪ್ರಸ್ತಾವನೆ:**

ಶ್ರೀ ಎಂ. ಮಾದೇಗೌಡ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಚಿಕ್ಕಮಗಳೂರು ಇವರು ಈ ಹಿಂದೆ ಮಂಡ್ಯ ಜಿಲ್ಲೆಯ ಸಹಾಯಕ ನಿರ್ದೇಶಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕೊಲೆ ಪ್ರಕರಣದಲ್ಲಿ ಭಾಗಿಯಾಗಿದ್ದಾರೆಂದು ಇಲವಾಲ ಪೋಲೀಸ್ ಠಾಣೆಯಲ್ಲಿ ಪ್ರಕರಣ ದಾಖಲಾಗಿ ಇವರನ್ನು ದಸ್ತಗಿರಿ ಮಾಡಿ ಮೈಸೂರಿನ ನ್ಯಾಯಾಲಯದಲ್ಲಿ ಆರೋಪಿಯನ್ನು ಹಾಜರುಪಡಿಸಿದ್ದ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ದಿನಾಂಕ 15.4.1997ರಿಂದ ಜಾರಿಗೆ ಬರುವಂತೆ ಇವರನ್ನು ಅಮಾನತ್ತಿನಲ್ಲಿಡಲಾಗಿತ್ತು. ತದನಂತರ ದಿನಾಂಕ 18.9.1997ರಂದು ಸರ್ಕಾರವು ಇವರ ಅಮಾನತ್ತಿನ ಆದೇಶವನ್ನು ರದ್ದುಪಡಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಆದೇಶದಂತೆ ಮೈಸೂರಿನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯವು ಪ್ರಕರಣ ಸಂಖ್ಯೆ: ಎಸ್.ಸಿ/248/1997 ಮತ್ತು 127/1998ರಲ್ಲಿ ದಿನಾಂಕ 18.04.2006ರಂದು ತೀರ್ಪು ನೀಡಿ ಶ್ರೀ ಎಂ. ಮಾದೇಗೌಡ ತಂದೆ ಮುನಿಗೌಡ, ಪ್ರಕರಣದ ಆರೋಪಿ ಸಂಖ್ಯೆ(2) ಇವರನ್ನು ಇವರ ಮೇಲೆ ಹೊರಿಸಿರುವ ಆರೋಪದಿಂದ ಖುಲಾಸೆಗೊಳಿಸಿ ದೋಷಮುಕ್ತರನ್ನಾಗಿ ಮಾಡಿ ಬಿಡುಗಡೆ ಆದೇಶ ಹೊರಡಿಸಿರುತ್ತದೆ. ಈ ಆದೇಶದ ವಿರುದ್ಧ ಯಾವುದೇ ಮೇಲ್ಮನವಿಯನ್ನು ಸಲ್ಲಿಸಲು ಅರ್ಹ ಪ್ರಕರಣವಲ್ಲವೆಂದು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಸರ್ಕಾರವು ತೀರ್ಮಾನಿಸಿರುತ್ತದೆ.

ಶ್ರೀ ಎಂ. ಮಾದೇಗೌಡ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಚಿಕ್ಕಮಗಳೂರು ಇವರನ್ನು ಅಮಾನತ್ತಿನಲ್ಲಿಟ್ಟಿದ ದಿನಾಂಕ 15.4.1997ರಿಂದ 19.9.1997ರವರೆಗಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸುವಂತೆ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ರವರು ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 167 ಕಸನಿ 2007, ಬೆಂಗಳೂರು, ದಿನಾಂಕ: 6ನೇ ಜನವರಿ 2009**

ಶ್ರೀ ಎಂ. ಮಾದೇಗೌಡ, ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಚಿಕ್ಕಮಗಳೂರು ಇವರನ್ನು ಅಮಾನತ್ತಿನಲ್ಲಿಟ್ಟಿದ್ದ ದಿನಾಂಕ 15.4.1997 ರಿಂದ 19.9.1997ರ ವರೆಗಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.407

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿ ನೂತನವಾಗಿ ನಿರ್ಮಿಸಿರುವ ಪುಸ್ತಕ ಮಾರಾಟ ಮಳಿಗೆಗೆ ರ್‍ಯಾಕ್‌ಗಳನ್ನು ಮಾಡಿಸಿದ ವೆಚ್ಚ ಪಾವತಿ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ: ಕಸನಿ/5/2003–04, ದಿನಾಂಕ 21–10–2008.

**ಪ್ರಸ್ತಾವನೆ:**

ಮೇಲೆ ಓದಲಾದ ದಿ: 21–10–08ರ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರದಲ್ಲಿ ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿ ನೂತನವಾಗಿ ನಿರ್ಮಿಸಿರುವ ಪುಸ್ತಕ ಮಾರಾಟ ಮಳಿಗೆಗೆ ರ್‍ಯಾಕ್‌ಗಳನ್ನು ಮಾಡಿಸಿದ ವೆಚ್ಚದ ಸಂಬಂಧ ಅಭಿಯಂತರರು, ನಂ.7, ಕಟ್ಟಡಗಳ ಉಪ ವಿಭಾಗ, ಬೆಂಗಳೂರು ಇವರು ಮನವಿ ಮಾಡಿ ಪುಸ್ತಕ ರ್‍ಯಾಕ್ ತಯಾರಿಸಲು ರೂ.8.00 ಲಕ್ಷಗಳನ್ನು ಠೇವಣಿ ಕರಿಸಲಾಗಿತ್ತು. ಆದರೆ ಸರ್ಕಾರದ ಪ್ರಧಾನ ಮುಖ್ಯವಾಸ್ತು ಶಿಲ್ಪಿಗಳ ನೀಲಿ ನಕ್ಷೆಯಂತೆ ಪುಸ್ತಕ ರ್‍ಯಾಕನ್ನು ನಿರ್ಮಿಸಲು ಟೆಂಡರ್ ಪ್ರೀಮಿಯಂ ಸೇರಿ ರೂ.22.00 ಲಕ್ಷಗಳು ವೆಚ್ಚವಾಗಿದ್ದು, ಸದರಿ ರ್‍ಯಾಕ್‌ಗಳನ್ನು ನಿರ್ಮಿಸಲು ಒಟ್ಟು ರೂ.14.00 ಲಕ್ಷಗಳು ಹೆಚ್ಚುವರಿಯಾಗಿ ಕಾರ್ಯಪಾಲಕ ಅಭಿಯಂತರರು, ನಂ.7, ಕಟ್ಟಡಗಳ ಉಪ ವಿಭಾಗ, ಇವರಿಗೆ ಠೇವಣಿ ಇಡಲು ಕೋರಿರುತ್ತಾರೆ. ಈಗಾಗಲೇ ಕಾರ್ಯಪಾಲಕ ಅಭಿಯಂತರರು, ನಂ.7, ಕಟ್ಟಡಗಳ ಉಪ ವಿಭಾಗ, ಬೆಂಗಳೂರು ಇವರಿಗೆ ಠೇವಣಿ ಮಾಡಲಾಗಿದ್ದು, ರೂ.37.31 ಲಕ್ಷಗಳಲ್ಲಿ ರೂ.2,31,000ಗಳು ವೆಚ್ಚವಾಗದೆ, ಬಾಕಿ ಇದ್ದು ಹೀಗಾಗಿ ಸದರಿಯವರಿಗೆ ರೂ.11.69 ಲಕ್ಷಗಳನ್ನು ಠೇವಣಿಯಾಗಿ ಇಡಬೇಕಾಗಿರುವುದರಿಂದ ಈ ಮೊತ್ತವನ್ನು ಪ್ರಸ್ತಕ ಸಾಲಿನ ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ) ಶೀರ್ಷಿಕೆಯಡಿ ಅವಕಾಶ ಮಾಡಿಕೊಂಡಿರುವ ರೂ.50.00ಲಕ್ಷಗಳಲ್ಲಿ ಪಾವತಿಸಲು ನಿರ್ಧರಿಸಿರುವ ಹಿನ್ನಲೆಯಲ್ಲಿ ರೂ.11.69 ಲಕ್ಷಗಳನ್ನು ಮಂಜೂರು ಮಾಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 137 ಕಸನಿ 2008, ಬೆಂಗಳೂರು, ದಿನಾಂಕ: 1ನೇ ಜನವರಿ 2009**

ರವೀಂದ್ರ ಕಲಾಕ್ಷೇತ್ರದ ಆವರಣದಲ್ಲಿ ನೂತನವಾಗಿ ನಿರ್ಮಿಸಿರುವ ಪುಸ್ತಕ ಮಾರಾಟ ಮಳಿಗೆಗೆ ರ್‍ಯಾಕ್‌ಗಳನ್ನು ಮಾಡಿಸಿದ ಬಾಬ್ತು ಠೇವಣಿ ಮೊತ್ತ ರೂ.11,69,000.00 (ರೂಪಾಯಿ ಹನ್ನೊಂದು ಲಕ್ಷದ ಅರತೊಂಬತ್ತು ಸಾವಿರ ಮಾತ್ರ) ಗಳನ್ನು ಕಾರ್ಯಪಾಲಕ ಅಭಿಯಂತರರು, ನಂ.7, ಕಟ್ಟಡಗಳ ಉಪವಿಭಾಗ, ಲೋಕೋಪಯೋಗಿ ಇಲಾಖೆ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಅನುಮತಿ ನೀಡಲಾಗಿದೆ;

1. ಈ ಯೋಜನೆಯನ್ನು ಪಾರದರ್ಶಕ ನಿಯಮ 1999–2000ಗಳನ್ನು ಅನುಸರಿಸಿ ಕ್ರಮ ವಹಿಸುವುದು.
2. ಯೋಜನೆಗೆ ಸಂಬಂಧಿಸಿದ ಹಣ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸುವುದು.

ಈ ವೆಚ್ಚವನ್ನು 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–31–059 (ಯೋಜನೆ)ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 1448 ಐಎಫ್ (ಬಿಎ) 2008, ದಿನಾಂಕ: 21–11–2008ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.278

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ ಅವರ ಆಪ್ತ ಶಾಖೆಗೆ ಆಪ್ತ ಸಹಾಯಕರನ್ನು ಹಾಗೂ ವಾಹನ ಚಾಲಕರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ ಅವರ ಟಿಪ್ಪಣಿ ಸಂಖ್ಯೆ ಕ.ಪು.ಪ್ರಾ.:ಅ:12: 2008–09, ದಿನಾಂಕ: 25.8.2008.

2. ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ ಅವರ ಟಿಪ್ಪಣಿ ಸಂಖ್ಯೆ ಕ.ಪು.ಪ್ರಾ:ಅ:ಸಿಬ್ಬಂದಿ–3:2008–09, ದಿನಾಂಕ:19.9.2008.

**ಪ್ರಸ್ತಾವನೆ:**

ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ ಅವರ ಮೇಲೆ (1) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಅವರ ಅಧಿಕೃತ ವಾಹನಕ್ಕೆ ಶ್ರೀ ಬಿ.ವಿ. ಪ್ರಕಾಶ್ ಇವರನ್ನು ದಿನಾಂಕ:12.6.2008 ರಿಂದ ವಾಹನ ಚಾಲಕರನ್ನಾಗಿ ನೇಮಕ ಮಾಡಿಕೊಂಡಿದ್ದು, ಸದರಿ ಪ್ರಸ್ತಾವನೆಯನ್ನು ಹಿಂದಕ್ಕೆ ಪಡೆದು, ದಿನಾಂಕ:25.8.2008 ರಿಂದ ಜಾರಿಗೆ ಬರುವಂತೆ ಶ್ರೀ ಈ. ಶಂಕರ್, ಬೆಂಗಳೂರು ಇವರನ್ನು ಅವರ ಅಧಿಕೃತ ವಾಹನದ ವಾಹನ ಚಾಲಕರನ್ನಾಗಿ ನೇಮಕ ಮಾಡಿಕೊಂಡಿದ್ದು, ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ:19.9.2008ರ ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ ಅವರ ಟಿಪ್ಪಣಿಯಲ್ಲಿ ದಿನಾಂಕ:19.9.2008 ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಅವರ ಆಪ್ತ ಸಹಾಯಕರನ್ನಾಗಿ ಕು: ಇಂದಿರಾ ಎನ್., ಬೆಂಗಳೂರು ಇವರನ್ನು ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಂಡಿದ್ದು, ಈ ಬಗ್ಗೆಯೂ ಸಹ ಅಗತ್ಯ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 72 ಕಸನಿ 2008 (ಭಾಗ) ಬೆಂಗಳೂರು ದಿನಾಂಕ: 1ನೇ ಜನವರಿ 2009**

ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ಅವರ ಆಪ್ತ ಶಾಖೆಗೆ ಈ ಕೆಳಕಂಡ ಸಿಬ್ಬಂದಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ಹಾಗೂ ನಮೂದಿಸಿದ ದಿನಾಂಕದಿಂದ ಗುತ್ತಿಗೆ ಆಧಾರದ ಮೇಲೆ ಅಧ್ಯಕ್ಷರ ಪದಾವಧಿಯವರೆಗೆ ಅಥವಾ ಈ ಬಗ್ಗೆ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ನೇಮಕ ಮಾಡಿರುವ ಹುದ್ದೆ | ಜಾರಿಗೆ ಬರುವ ದಿನಾಂಕ |
|---|---|---|---|
| 1. | ಕು: ಇಂದಿರಾ ಎನ್,<br>ತಂದೆ ನರಸಿಂಹಯ್ಯ ಟಿ.ಎನ್, ನಂ. 3507/ಸಿ, 6ನೇ ಅಡ್ಡರಸ್ತೆ,<br>ರಾಜಾಜಿನಗರ 2ನೇ ಹಂತ, ಗಾಯತ್ರಿನಗರ, ಬೆಂಗಳೂರು–21 | ಆಪ್ತ ಸಹಾಯಕರು | 19–09–2008 |
| 2. | ಶ್ರೀ ಈ. ಶಂಕರ್,<br>ತಂದೆ ಶ್ರೀ ಈಶ್ವರಾಚಾರ್, ಸಂ. 14, ಹೊಸಕೆರೆಹಳ್ಳಿ, ಕೆರೆಕೋಡಿ,<br>ಮುನೇಶ್ವರ ನಗರ, ಬನಶಂಕರಿ 3ನೇ ಹಂತ, ಬೆಂಗಳೂರು–85 | ವಾಹನ ಚಾಲಕರು | 25–08–2008 |

ಈ ನೇಮಕಾತಿಗೆ ಸಂಬಂಧಿಸಿದ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ನಂತರ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 277

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಅ.ನ. ಕೃಷ್ಣರಾಯರ ಸ್ಮಾರಕ ನಿರ್ಮಿಸಲು ಅ.ನ.ಕೃ. ಪ್ರತಿಷ್ಠಾನಕ್ಕೆ ಅನುದಾನ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ: ಕಸನಿ 16 ಸ್ಮಾರಕ 2002–03 ದಿನಾಂಕ 22–09–2008.

**ಪ್ರಸ್ತಾವನೆ:**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರು ಮೇಲೆ ಓದಲಾದ ದಿನಾಂಕ 22.09.2008ರ ಪತ್ರದಲ್ಲಿ ಕನ್ನಡದ ಸುಪ್ರಸಿದ್ದ ಕಾದಂಬರಿಕಾರ/ಸಾಹಿತಿಗಳಾದ ಅ.ನ. ಕೃಷ್ಣರಾಯರ ಸ್ಮಾರಕ ನಿರ್ಮಿಸಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಬೆಂಗಳೂರಿನ ಜೆ.ಪಿ. ನಗರ ಬಡಾವಣೆಯ 2ನೇ ಹಂತದಲ್ಲಿ 1640 ಚದರ ಮೀಟರುಗಳ ನಾಗರೀಕ ಸೌಲಭ್ಯವುಳ್ಳ ನಿವೇಶನ ಸಂಖ್ಯೆ: 36ಎ(ಪಿ)ನ್ನು ಮಂಜೂರು ಮಾಡಿದೆ. ಸದರಿ ನಿವೇಶನವನ್ನು ಅ.ನ.ಕೃ. ಪ್ರತಿಷ್ಠಾನದವರು ಸ್ಮಾರಕ ನಿರ್ಮಿಸಲು ಒಂದೇ ಕಂತಿನಲ್ಲಿ ರೂ.41.00 ಲಕ್ಷಗಳನ್ನು ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರಿಗೆ ಪಾವತಿಸಿ ವಶಕ್ಕೆ ತೆಗೆದುಕೊಳ್ಳಲು ಮೇಲ್ಕಂಡ ಮೊತ್ತವನ್ನು ಬಿಡುಗಡೆ ಮಾಡಬೇಕೆಂದು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 56 ಕಸನಿ 2008, ಬೆಂಗಳೂರು, ದಿನಾಂಕ: 20ನೇ ನವೆಂಬರ್ 2008.**

ಕನ್ನಡದ ಸುಪ್ರಸಿದ್ಧ ಕಾದಂಬರಿಕಾರರು/ಸಾಹಿತಿಗಳಾದ ಅ.ನ. ಕೃಷ್ಣರಾಯರ ಸ್ಮಾರಕವನ್ನು ಬೆಂಗಳೂರಿನ ಜೆ.ಪಿ.ನಗರ ಬಡಾವಣೆಯ 2ನೇ ಹಂತದಲ್ಲಿ ನಿರ್ಮಿಸಲು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಮಂಜೂರು ಮಾಡಿರುವ 1640 ಚದರ ಮೀಟರುಗಳ ನಾಗರೀಕ ಸೌಲಭ್ಯ ನಿವೇಶನ ಸಂಖ್ಯೆ: 36ಎ(ಪಿ)ನ್ನು ಅ.ನ.ಕೃ. ಪ್ರತಿಷ್ಠಾನದವರು ವಶಕ್ಕೆ ತೆಗೆದುಕೊಳ್ಳಲು ಒಂದೇ ಕಂತಿನಲ್ಲಿ ರೂ.41.00 ಲಕ್ಷಗಳನ್ನು (ರೂಪಾಯಿ ನಲ್ವತ್ತೊಂದು ಲಕ್ಷಗಳು ಮಾತ್ರ) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–31–059(ಯೋಜನೆ) ಅನಕೃ ಸ್ಮಾರಕ ಶೀರ್ಷಿಕೆಯಡಿ ಕಲೆ ಮತ್ತು ಸಂಸ್ಕೃತಿ ಪ್ರೋತ್ಸಾಹದಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 1228/ಎಎಫ್‌ಬಿಎ/2008 ದಿನಾಂಕ 25.10.2008 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.7.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.151

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಶ್ರೀಮತಿ ಡಿ.ಎಲ್. ಅಲ್ಮೇಡಾ, ಕಿರಿಯ ಸಹಾಯಕರು, ವಾಯುವ್ಯ ಕರ್ನಾಟಕ ಸಾರಿಗೆ ಸಂಸ್ಥೆ, ಕಾರವಾರ, ಇವರನ್ನು ಸಹಾಯಕ ನಿರ್ದೇಶಕರ ಕಚೇರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕಾರವಾರ ಜಿಲ್ಲೆ, ಇಲ್ಲಿಗೆ ನಿಯೋಜನೆ ಮೇಲೆ ನೇಮಿಸುವ ಬಗ್ಗೆ.

**ಓದಲಾಗಿದೆ:**

1. ಮುಖ್ಯ ಸಿಬ್ಬಂದಿ ವ್ಯವಸ್ಥಾಪಕರು, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಹುಬ್ಬಳ್ಳಿ, ಇವರ ಪತ್ರ ಸಂಖ್ಯೆ: ವಾಕರಸಾ/ಕೇಕ/ಹು/ಆಡಳಿತ/ ಎ1/1980, ದಿನಾಂಕ: 19–09–2008.
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಪತ್ರ ಸಂಖ್ಯೆ: ಕಸನಿ/169/ ಸಿಬ್ಬಂದಿ1/ 2006–07, ದಿನಾಂಕ: 25–10–2008.

**ಪ್ರಸ್ತಾವನೆ:**

ಮುಖ್ಯ ಸಿಬ್ಬಂದಿ ವ್ಯವಸ್ಥಾಪಕರು, ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಹುಬ್ಬಳ್ಳಿ, ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ: 19–09–2008ರ ಪತ್ರದಲ್ಲಿ ಶ್ರೀಮತಿ ಡಿ.ಎಲ್. ಅಲ್ಮೇಡಾ, ಕಿರಿಯ ಸಹಾಯಕರು, ವಾಯುವ್ಯ

ಕರ್ನಾಟಕ ಸಾರಿಗೆ ಸಂಸ್ಥೆ, ಕಾರವಾರ, ಅವರ ಸೇವೆಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ನಿಯೋಜನೆ ಮೇಲೆ ಬಿಟ್ಟುಕೊಡಲು ತಮ್ಮ ಒಪ್ಪಿಗೆ ನೀಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರ ಪತ್ರ ದಿ: 25–10–2008 ರಲ್ಲಿ ಸದರಿ ನೌಕರರನ್ನು ಇಲಾಖೆಯ ಸಹಾಯಕ ನಿರ್ದೇಶಕರ ಕಚೇರಿ, ಕಾರವಾರ, ಇಲ್ಲಿ ಖಾಲಿ ಇರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ನಿಯೋಜನೆ ಮೇಲೆ ನೇಮಿಸಲು ಸಹಮತಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 109 ಕಸನಿ 2008, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2008**

ಶ್ರೀಮತಿ ಡಿ.ಎಲ್.ಅಲ್ಮೇಡಾ, ಕಿರಿಯ ಸಹಾಯಕರು, ವಾಯುವ್ಯ ಕರ್ನಾಟಕ ಸಾರಿಗೆ ಸಂಸ್ಥೆ, ಕಾರವಾರ, ಇವರನ್ನು ಸಹಾಯಕ ನಿರ್ದೇಶಕರ ಕಚೇರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಕಾರವಾರ, ಇಲ್ಲಿ ಖಾಲಿ ಇರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ತಕ್ಷಣದಿಂದ ಜಾರಿಗೆ ಬರುವಂತೆ ನಿಯೋಜನೆ ಮೇಲೆ ನೇಮಿಸಲಾಗಿದೆ.

ಇವರ ನಿಯೋಜನಾ ಷರತ್ತು ಮತ್ತು ನಿಬಂಧನೆಗಳನ್ನು ನಂತರ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 150

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಅನಿವಾಸಿ ಭಾರತೀಯ ಕೋಶ ರಚಿಸುವ ಬಗ್ಗೆ – ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ ಇದರ ಉಪಾಧ್ಯಕ್ಷರ ಆಪ್ತಶಾಖೆಗೆ ಹಾಗೂ ಅವರ ಕಛೇರಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಪತ್ರ ಸಂಖ್ಯೆ: ಕಸಇ/ನಿಆಶಾ/1/2008–09 ದಿನಾಂಕ 24.06.2008.

2) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 68 ಶಿಸಾನಿ 2008, ದಿನಾಂಕ 05–08–2008.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿ. 24–06–2008ರ ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರದಲ್ಲಿ ಅನಿವಾಸಿ ಕನ್ನಡಿಗರ ಕೋಶ ರಚಿಸುವ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಲ್ಲಿ ಒಬ್ಬ ಉಪ ಕಾರ್ಯದರ್ಶಿ ಹುದ್ದೆಗೆ ಸಮಾನದ ವಿಶೇಷಾಧಿಕಾರಿಯನ್ನು ಹಾಗೂ ಅಗತ್ಯ ಅಧಿಕಾರಿ/ಸಿಬ್ಬಂದಿ ಒದಗಿಸುವ ಸಲುವಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರ ಆದೇಶದಲ್ಲಿ ಸರ್ಕಾರವು ಅನಿವಾಸಿ ಭಾರತೀಯ ಸಮಿತಿ, ಕರ್ನಾಟಕ 2008–09ರ ಸಾಲಿನ ರಚಿಸಿ ಅದಕ್ಕೆ ಸಂಬಂಧಿಸಿದಂತೆ ರೂಪುರೇಷೆಗಳನ್ನು ಸಮಿತಿಯ ಧ್ಯೇಯೋದ್ದೇಶಗಳನ್ನು ತಿಳಿಸಿರುತ್ತಾರೆ. ಕೋಶದ ವೆಚ್ಚ ನಿರ್ವಹಣೆಗಾಗಿ ಅನುದಾನದ ಬಗ್ಗೆ ಕೂಲಂಕೂಷವಾಗಿ ಪರಿಶೀಲಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 67 ಕಸನಿ 2008, ಬೆಂಗಳೂರು, ದಿನಾಂಕ 18ನೆ ಡಿಸೆಂಬರ್ 2008**

2008–09 ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿರುವ ಅನಿವಾಸಿ ಭಾರತೀಯ ಸಮಿತಿಗೆ ಅದರ ಉಪಾಧ್ಯಕ್ಷರ ಆಪ್ತಶಾಖೆಗೆ ಹಾಗೂ ಅವರ ಕಛೇರಿಯ ವೆಚ್ಚಗಳನ್ನು ನಿರ್ವಹಿಸಲು ಆಡಳಿತ ಇಲಾಖೆಯಾದ ಸಿಆಸುಇ (ರಾಜ್ಯ ಶಿಷ್ಠಾಚಾರ)ಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಲೆಕ್ಕಶೀರ್ಷಿಕೆ 2205–00–800–0–09–059 (ಇತರೆ ಖರ್ಚು) (ಯೋಜನೆ) ಅಡಿಯಲ್ಲಿ ಒದಗಿಸಿರುವ ರೂ.100.00 ಲಕ್ಷಗಳನ್ನು (ರೂಪಾಯಿ ನೂರು ಲಕ್ಷಗಳು) ಬಿಡುಗಡೆ ಮಾಡಲು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 2141 ವೆಚ್ಚ: 5/2008 ದಿ. 07–11–2008 ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 144

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಕನ್ನಡ ಭವನ ಚಾಲುಕ್ಯ ವಿಭಾಗದ ಲಿಫ್ಟ್‌ನ ವಾರ್ಷಿಕ ನಿರ್ವಹಣಾ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಮೆ॥ ಓ.ಟಿ.ಐ.ಎಸ್. ಎಲಿವೇಟರ್ ಕಂಪನಿಯ ಪತ್ರ ಸಂಖ್ಯೆ: ಎಲ್.3597 ದಿನಾಂಕ: 01.10.2008.

2) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅವರ ಪತ್ರ ಸಂಖ್ಯೆ: ಕಸನಿ:10:ನಯನ ಲಿಫ್ಟ್:2008–09 ದಿನಾಂಕ: 25.11.2008.

**ಪ್ರಸ್ತಾವನೆ:**

ಮೆ॥ ಓ.ಟಿ.ಐ.ಎಸ್. ಎಲಿವೇಟರ್, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ 01.10.2008ರ ಪತ್ರದಲ್ಲಿ ಕನ್ನಡ ಭವನದಲ್ಲಿ ಚಾಲುಕ್ಯ ವಿಭಾಗದಲ್ಲಿ ಅಳವಡಿಸಿರುವ ಲಿಫ್ಟ್‌ನ ದಿನಾಂಕ 01.10.2008 ರಿಂದ 30.09.2009 ರವರೆಗಿನ ವಾರ್ಷಿಕ ಲಿಫ್ಟ್ ನಿರ್ವಹಣೆಗೆ ರೂ. 50,716.00ಗಳು ಮತ್ತು ಅದರ ಮೇಲೆ ಶೇಕಡ 12.36% ರಷ್ಟು ಸೇವಾ ತೆರಿಗೆ (ರೂ. 6268.00) ಸೇರಿಸಿ ಒಟ್ಟು ರೂ. 56,984.00 ಭರಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರನ್ನು ಕೋರಿರುತ್ತಾರೆ. ಮೇಲೆ (2)ರಲ್ಲಿ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ 25.11.2008ರ ಪತ್ರದಲ್ಲಿ ಅವರು ಸದರಿ ಮೊತ್ತವನ್ನು ಮೆ॥ ಓ.ಟಿ.ಐ.ಎಸ್. ಎಲಿವೇಟರ್ ಕಂಪನಿ, ಬೆಂಗಳೂರು ಇವರಿಗೆ ಪಾವತಿಸಬೇಕಾಗಿರುವುದರಿಂದ ಸರ್ಕಾರಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 155 ಕಸನಿ 2008, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2009**

ಬೆಂಗಳೂರು ಜೆ.ಸಿ. ರಸ್ತೆಯಲ್ಲಿರುವ ಕನ್ನಡ ಭವನದ ಚಾಲುಕ್ಯ ವಿಭಾಗದಲ್ಲಿರುವ ಓ.ಟಿ.ಐ.ಎಸ್. ಎಲಿವೇಟರ್ ಲಿಫ್ಟ್‌ನ 2008–09ನೇ ಸಾಲಿನ ವಾರ್ಷಿಕ ಲಿಫ್ಟ್ ನಿರ್ವಹಣೆಗೆ (ಅಂದರೆ ದಿನಾಂಕ 01.10.2008 ರಿಂದ 30.09.2009 ರವರೆಗೆ) ವೆಚ್ಚವಾಗುವ ರೂ. 56,984.00 (ರೂಪಾಯಿ ಐವತ್ತಾರು ಸಾವಿರದ ಒಂಬೈನೂರ ಎಂಬತ್ತನಾಲ್ಕು ಮಾತ್ರ) ಗಳನ್ನು ಭರಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರಿಗೆ ಈ ಮೂಲಕ ಸರ್ಕಾರದ ಅನುಮತಿ ನೀಡಲಾಗಿದೆ. ಈ ಸಂಬಂಧ ತಗಲುವ ವೆಚ್ಚಗಳನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 4202–04–800–1–01–139 (ಯೋಜನೆ) ಇದರಡಿ ನಯನ ರಂಗಮಂದಿರ ನಿರ್ವಹಣೆಗೆ ನಿಗದಿಪಡಿಸಿರುವ ರೂ. 5.00 ಲಕ್ಷ ಅನುದಾನದ ಮೊತ್ತದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಇಡಿ 68 ಐಎಫ್ (ಬಿಎ) 2009, ದಿನಾಂಕ 16.01.2009ರಲ್ಲಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.580

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಪ್ರೊಫೆಸರ್ ಎಂ.ಡಿ. ಕೃಷ್ಣರಾವ್ ಹಾಗೂ ಮತ್ತಿತರರು ಸಂಪಾದಿಸಿ ರಚಿಸಿರುವ ಗ್ಲಿಂಪ್ಸಸ್ ಆಫ್ ಕರ್ನಾಟಕ ಸಂಪುಟವನ್ನು ಪ್ರಕಟಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ 20.06.2008ರ ಸಭಾ ನಡುವಳಿ.

2) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 10 ರಾಪಸ 2008, ದಿನಾಂಕ 08–12–2008.

3) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಗ್ಯಾಇ:ಸಿ2: 2008–09, ದಿನಾಂಕ 17.01.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 20.06.2008ರಂದು ನಡೆದ ಕಾರ್ಯದರ್ಶಿಗಳ ಸಭೆಯಲ್ಲಿ ಗ್ಯಾಸೆಟಿಯರ್ ಇಲಾಖೆಯಿಂದ 1960ರಲ್ಲಿ ಪ್ರೊ॥ ಎಂ.ಡಿ. ಕೃಷ್ಣರಾವ್ ಮತ್ತಿತರರು ಸಂಪಾದಿಸಿ ರಚಿಸಿರುವ ಗ್ಲಿಂಪ್ಸಸ್ ಆಫ್ ಕರ್ನಾಟಕ A Multicoloured Coffee Table Book ಸಂಪುಟವನ್ನು ಪ್ರಕಟಿಸಲು ತೀರ್ಮಾನಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿ: 8–12–2008ರ ಸರ್ಕಾರದ ಆದೇಶದಲ್ಲಿ ಗ್ಯಾಸೆಟಿಯರ್ ಇಲಾಖೆಗೆ ರೂ.50.00 ಲಕ್ಷಗಳ ಅನುದಾನವನ್ನು ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರ ದಿನಾಂಕ 17.01.2009ರ ಪತ್ರದಲ್ಲಿ 2008–09ನೇ ಸಾಲಿನಲ್ಲಿ ಸದರಿ ಕಾರ್ಯವನ್ನು ಶ್ರೀ ಎಸ್. ನಾಗರಾಜ್, ನಿವೃತ್ತ ಜಂಟಿ ನಿರ್ದೇಶಕರು, ಕೇಂದ್ರ ಪುರಾತತ್ವ ಇಲಾಖೆ ಇವರಿಗೆ ವಹಿಸಲು ತೀರ್ಮಾನಿಸಲಾಗಿದೆ ಎಂದು ವರದಿ ಮಾಡಿ, ಈ ಯೋಜನೆಗೆ 2008–09ನೇ ಸಾಲಿನ ಆಯವ್ಯಯದಲ್ಲಿ ರೂ.15.00 ಲಕ್ಷ ಒದಗಿಸಿಕೊಳ್ಳಲಾಗಿದ್ದು, ಸದರಿ ಮೊತ್ತವನ್ನು ಇಲಾಖೆಗೆ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೀಡಲಾಗಿರುವ ರೂ.50.00 ಲಕ್ಷಗಳ ಅನುದಾನದಲ್ಲಿ ಭರಿಸಲಾಗುವುದೆಂದು ತಡೆಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮುಖ್ಯ ಸಂಪಾದಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 25 ಕರಾಗೆ 2008, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಗ್ಯಾಸೆಟಿಯರ್ ಇಲಾಖೆಯಿಂದ 1960ರಲ್ಲಿ ಪ್ರೊ॥ ಎಂ.ಡಿ. ಕೃಷ್ಣರಾವ್ ಮತ್ತಿತರರು ಸಂಪಾದಿಸಿ ರಚಿಸಿರುವ ಗ್ಲಿಂಪ್ಸಸ್ ಆಫ್ ಕರ್ನಾಟಕ A Multicoloured Coffee Table Book ಸಂಪುಟವನ್ನು ಪ್ರಕಟಿಸಲು ರೂ.15.00 ಲಕ್ಷಗಳನ್ನು (ರೂಪಾಯಿ ಹದಿನೈದು ಲಕ್ಷಗಳು ಮಾತ್ರ) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಮಂಜೂರು ಮಾಡಿದೆ:

1) ಈ ಯೋಜನೆಗೆ ಕೆಟಿಟಿಪಿ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು
2) ಬಿಡುಗಡೆ ಮಾಡಲಾದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಬಳಸತಕ್ಕದ್ದು.
3) ಹಣ ಬಳಕೆ ಪ್ರಮಾಣಪತ್ರವನ್ನು ಸಲ್ಲಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2008–09ನೇ ಸಾಲಿನ ಲೆಕ್ಕಶೀರ್ಷಿಕೆ 3454–02–110–0–01 ಕರ್ನಾಟಕ ಗ್ಯಾಸೆಟಿಯರ್ ಪರಿಷ್ಕರಣೆ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 1687 ಐಎಫ್(ಬಿಎ) 2008, ದಿನಾಂಕ 1.1.2009ರಲ್ಲಿ ಸಹಮತಿಯನ್ನು ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.623

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಸರ್ ಫ್ರಾನ್ಸಿಸ್ ಬುಕಾನನ್ ರಚಿಸಿರುವ ಎ ಜರ್ನಿ ತ್ರೂ ಮೈಸೂರ್ ಅಂಡ್ ಮಲಬಾರ್ ಸಂಪುಟವನ್ನು ಪುನರ್ ಮುದ್ರಿಸಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ 20.06.2008ರ ಸಭಾ ನಡುವಳಿ.
2) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 10 ರಾಪಸ 2008, ದಿನಾಂಕ 08–12–2008.
3) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಗ್ಯಾಇ:ಸಿ2: 2008–09 ದಿನಾಂಕ 17.01.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 20.06.2008ರಂದು ನಡೆದ ಕಾರ್ಯದರ್ಶಿಗಳ ಸಭೆಯಲ್ಲಿ ಗ್ಯಾಸೆಟಿಯರ್ ಇಲಾಖೆಯಿಂದ ಸರ್ ಫ್ರಾನ್ಸಿಸ್ ಬುಕಾನನ್ ರಚಿಸಿರುವ ಎ ಜರ್ನಿ ತ್ರೂ ಮೈಸೂರು ಅಂಡ್ ಮಲಬಾರ್ ಸಂಪುಟವನ್ನು ಪುನರ್ ಮುದ್ರಿಸಲು ತೀರ್ಮಾನಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿ: 8–12–2008ರ ಸರ್ಕಾರದ ಆದೇಶದಲ್ಲಿ ಗ್ಯಾಸೆಟಿಯರ್ ಇಲಾಖೆಗೆ ರೂ.50.00 ಲಕ್ಷಗಳ ಅನುದಾನವನ್ನು ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಮುಖ್ಯಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರ ದಿನಾಂಕ 17.01.2009ರ ಪತ್ರದಲ್ಲಿ ಈ ಯೋಜನೆಗೆ 2008-09ನೇ ಸಾಲಿನ ಆಯವ್ಯಯದಲ್ಲಿ ರೂ.15.00 ಲಕ್ಷ ಒದಗಿಸಿಕೊಳ್ಳಲಾಗಿದ್ದು, ಸದರಿ ಮೊತ್ತವನ್ನು ಇಲಾಖೆಗೆ ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ನೀಡಲಾಗಿರುವ ರೂ.50.00 ಲಕ್ಷಗಳ ಅನುದಾನದಲ್ಲಿ ಭರಿಸಲಾಗುವುದೆಂದು ತಡೆಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮುಖ್ಯ ಸಂಪಾದಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 26 ಕರಾಗೆ 2008, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಗ್ಯಾಸೆಟಿಯರ್ ಇಲಾಖೆಯಿಂದ ಸರ್ ಫ್ರಾನ್ಸಿಸ್ ಬುಕಾನೆನ್ ರಚಿಸಿರುವ ಎ ಜರ್ನಿ ತ್ರೂ ಮೈಸೂರು ಅಂಡ್ ಮಲಬಾರ್ ಸಂಪುಟವನ್ನು ಪ್ರಕಟಿಸಲು ರೂ.15.00 ಲಕ್ಷಗಳನ್ನು (ರೂಪಾಯಿ ಹದಿನೈದು ಲಕ್ಷಗಳು ಮಾತ್ರ) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಮಂಜೂರು ಮಾಡಿದೆ:

1) ಈ ಯೋಜನೆಗೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ ಕಾಯ್ದೆ 1999 ಮತ್ತು ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು.
2) ಬಿಡುಗಡೆ ಮಾಡಲಾದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಬಳಸತಕ್ಕದ್ದು.
3) ಹಣ ಬಳಕೆ ಪ್ರಮಾಣಪತ್ರವನ್ನು ಸಲ್ಲಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2008-09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 3454-02-110-0-01 ಕರ್ನಾಟಕ ಗ್ಯಾಸೆಟಿಯರ್‌ಗಳ ಪರಿಷ್ಕರಣೆ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 1687 ಐಎಫ್(ಬಿಎ) 2008 ದಿನಾಂಕ 1.1.2009 ರಲ್ಲಿ ಸಹಮತಿಯನ್ನು ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.622

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** "ಜೂವೆಲ್ಸ್ ಆಫ್ ಅಡ್ಮಿನಿಸ್ಟ್ರೇಷನ್" ಗ್ರಂಥವನ್ನು ಎರಡು ಸಂಪುಟಗಳಲ್ಲಿ ರಚಿಸಿ ಪ್ರಕಟಿಸುವ ಬಗ್ಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ 20.06.2008ರ ಸಭಾ ನಡುವಳಿ.
2) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 10 ರಾಪಸ 2008, ದಿನಾಂಕ 08-12-2008.
3) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಗ್ಯಾಇ:ಸಿ2: 2008-09 ದಿನಾಂಕ 17.01.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 20.06.2008ರಂದು ನಡೆದ ಕಾರ್ಯದರ್ಶಿಗಳ ಸಭೆಯಲ್ಲಿ ಗ್ಯಾಸೆಟಿಯರ್ ಇಲಾಖೆಯಿಂದ "ಜೂವೆಲ್ಸ್ ಆಫ್ ಅಡ್ಮಿನಿಸ್ಟ್ರೇಷನ್" ಗ್ರಂಥವನ್ನು ಎರಡು ಸಂಪುಟಗಳಲ್ಲಿ ರಚಿಸಿ ಪ್ರಕಟಿಸುವ ಬಗ್ಗೆ ತೀರ್ಮಾನಿಸಲಾಯಿತು.

ಮೇಲೆ (2)ರಲ್ಲಿ ಓದಲಾದ ದಿ: 8-12-2008ರ ಸರ್ಕಾರದ ಆದೇಶದಲ್ಲಿ ಗ್ಯಾಸೆಟಿಯರ್ ಇಲಾಖೆಗೆ ರೂ.50.00 ಲಕ್ಷಗಳ ಅನುದಾನವನ್ನು ನೀಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರ ದಿನಾಂಕ 17.01.2009ರ ಪತ್ರದಲ್ಲಿ 2008-09ನೇ ಸಾಲಿನಲ್ಲಿ ಸದರಿ ಕಾರ್ಯವನ್ನು ಶ್ರೀ ಡಾ. ಸೂರ್ಯನಾಥ. ಯು. ಕಾಮತ್, ರವರಿಂದ ರಚಿಸಿ ಪ್ರಕಟಿಸಲು ತೀರ್ಮಾನಿಸಲಾಗಿದೆ ಎಂದು ವರದಿ ಮಾಡಿ, ಈ ಯೋಜನೆಗೆ 2008-09ನೇ ಸಾಲಿನ ಆಯವ್ಯಯದಲ್ಲಿ ರೂ.20.00 ಲಕ್ಷ ಒದಗಿಸಿಕೊಳ್ಳಲಾಗಿದ್ದು, ಸದರಿ ಮೊತ್ತವನ್ನು ಇಲಾಖೆಗೆ ಮೇಲೆ (2) ರಲ್ಲಿ ಓದಲಾದ

ಸರ್ಕಾರಿ ಆದೇಶದಲ್ಲಿ ನೀಡಲಾಗಿರುವ ರೂ.50.00 ಲಕ್ಷಗಳ ಅನುದಾನದಲ್ಲಿ ಭರಿಸಲಾಗುವುದೆಂದು ತಡೆಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮುಖ್ಯ ಸಂಪಾದಕರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 27 ಕರಾಗೆ 2008, ಬೆಂಗಳೂರು, ದಿನಾಂಕ: 9ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಗ್ಯಾಸೆಟಿಯರ್ ಇಲಾಖೆಯಿಂದ **"ಜೂವೆಲ್ಸ್ ಆಫ್ ಅಡ್ಮಿನಿಸ್ಟ್ರೇಷನ್"** ಗ್ರಂಥವನ್ನು ಎರಡು ಸಂಪುಟಗಳಲ್ಲಿ ರಚಿಸಿ ಪ್ರಕಟಿಸಲು ರೂ.20.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತು ಲಕ್ಷಗಳು ಮಾತ್ರ) ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಮಂಜೂರು ಮಾಡಿದೆ:

1) ಈ ಯೋಜನೆಗೆ ಕೆಟಿಪಿಪಿ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ಕೈಗೊಳ್ಳುವುದು.
2) ಬಿಡುಗಡೆ ಮಾಡಲಾದ ಹಣವನ್ನು ಉದ್ದೇಶಿತ ಕಾರ್ಯಕ್ರಮಕ್ಕೆ ಮಾತ್ರ ಬಳಸತಕ್ಕದ್ದು.
3) ಹಣ ಬಳಕೆ ಪ್ರಮಾಣಪತ್ರವನ್ನು ಸಲ್ಲಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2008-09ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 3454-02-110-0-01 ಕರ್ನಾಟಕ ಗ್ಯಾಸೆಟಿಯರ್‌ಗಳ ಪರಿಷ್ಕರಣೆ (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 1687 ಐಎಫ್(ಬಿಎ) 2008 ದಿನಾಂಕ 1.1.2009 ರಲ್ಲಿ ಸಹಮತಿಯನ್ನು ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.621

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಶ್ರೀ ವಿಜಯಕುಮಾರ್. ಎಂ. ಚನ್ನವೀರಗೌಡ ಬೆಂಗಳೂರು, ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತಶಾಖೆಯಲ್ಲಿ ವಾಹನ ಚಾಲಕರ ಹುದ್ದೆಗೆ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಟಿಪ್ಪಣಿ ಸಂಖ್ಯೆ: ಕಅಪ್ರಾ/ಅ-143/ 2008-09 ದಿನಾಂಕ 04.11.2008

**ಪ್ರಸ್ತಾವನೆ:**

ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ ಓದಲಾದ ದಿನಾಂಕ 04.11.2008ರ ಟಿಪ್ಪಣಿಯಲ್ಲಿ ಅವರ ಆಪ್ತಶಾಖೆಗೆ ಶ್ರೀ ಆರ್. ಪಂಚಾಕ್ಷರಿ, ವಾಹನ ಚಾಲಕರು, ಇವರ ಸೇವೆಯನ್ನು ದಿನಾಂಕ 31-10-2008ಕ್ಕೆ ಅಂತ್ಯಗೊಳಿಸಿ ಶ್ರೀ ವಿಜಯಕುಮಾರ್, ಬೆಂಗಳೂರು, ಇವರನ್ನು ವಾಹನ ಚಾಲಕರನ್ನಾಗಿ ನೇಮಕಾತಿ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 49 ಕೆಬಿಎಲ್ 2008, ಬೆಂಗಳೂರು, ದಿನಾಂಕ: 22ನೇ ಜನವರಿ 2009**

ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ರವರ ಆಪ್ತಶಾಖೆಗೆ ಶ್ರೀ ವಿಜಯಕುಮಾರ್, ಎಂ. ಚನ್ನವೀರಗೌಡ, ನಂ. 93, ನಮ್ಮನೆ ಸುಮ್ಮನೆ, 3ನೇ ಅಡ್ಡರಸ್ತೆ, 4 ಹಂತ, ಜೆ ಪಿ ನಗರ, ಬೆಂಗಳೂರು-560093, ಇವರನ್ನು ದಿನಾಂಕ 1-11-2008 ರಿಂದ ಜಾರಿಗೆ ಬರುವಂತೆ ಈ ಆದೇಶದೊಡನೆ ಲಗತ್ತಿಸಿರುವ ಷರತ್ತು ಮತ್ತು ನಿಬಂಧನೆಗೆ ಒಳಪಟ್ಟಂತೆ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 2567 ವೆಚ್ಚ-7/2008 ದಿನಾಂಕ 23-12-2008ರಲ್ಲಿ ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುಕ್ಮಿಣಿ ದಿವಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ) (ಪ್ರ)

ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 49 ಕೆಜಎಲ್ 2008 ದಿನಾಂಕ: 22.01.2009

ಗುತ್ತಿಗೆ ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು

1. ಶ್ರೀ ವಿಜಯಕುಮಾರ್, ವಾಹನ ಚಾಲಕ ರವರ ಗುತ್ತಿಗೆ ನೇಮಕಾತಿಯ ಅವಧಿಯು ದಿನಾಂಕ 01.11.2008 ರಿಂದ ಜಾರಿಗೆ ಬರುವಂತೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಪದಾವಧಿಯವರೆಗೆ ಅಥವಾ ಮುಂದಿನ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಇವರ ಗುತ್ತಿಗೆ ನೇಮಕಾತಿಗೆ ಮಾಸಿಕ ರೂ. 5160/– (ಐದು ಸಾವಿರದ ಒಂದುನೂರ ಅರವತ್ತು ರೂಪಾಯಿಗಳು ಮಾತ್ರ) ಗಳ ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಇದಲ್ಲದೆ, ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರನು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಟ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವೈದ್ಯಕೀಯ ಕಾರಣಗಳ ಮೇರೆಗಾಗಲೀ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು, ವೈದ್ಯಕೀಯ ಕಾರಣಗಳ ಮೇರೆಗೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರುಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯನ್ನು ಕರ್ತವ್ಯ ರಹಿತ ದಿನಗಳೆಂದು (ಡೈಸ್–ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರೆ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.
7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಿಗೆ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ, ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
8. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಗುತ್ತಿಗೆ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಗಳಿಂದ ನೆರವೇರಿಸುವುದು.
11. ಅವರ ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
12. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
14. ಅವರ ದುರ್ನತಡೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬುಕೊಡಲು ಹೊಣೆಯಾಗಿರುತ್ತಾರೆ.
15. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**ರುಕ್ಮಿಣಿ ದಿವಾಕರ್**

ಪಿ.ಆರ್.406

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ) (ಪ್ರ)

ತಿದ್ದೋಲೆ

**ಸಂಖ್ಯೆ: ಕಸಂವಾಪ್ರ 24 ಕೆಓಎಲ್ 2008, ಬೆಂಗಳೂರು, ದಿನಾಂಕ: 12ನೇ ಡಿಸೆಂಬರ್ 2008.**

ಶ್ರೀಮತಿ ಶ್ರೀವಿದ್ಯಾ, ಶೀಘ್ರಲಿಪಿಗಾರರ ಗುತ್ತಿಗೆ ಆಧಾರದ ನೇಮಕಾತಿಗೆ ಸಂಬಂಧಿಸಿದ ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 24 ಕೆಓಎಲ್ 2008 ದಿನಾಂಕ 17.09.2008ರ ಆದೇಶ ಭಾಗದಲ್ಲಿ "ತಕ್ಷಣದಿಂದ ಜಾರಿಗೆ ಬರುವಂತೆ" ಎಂಬುದರ ಬದಲಾಗಿ "ದಿನಾಂಕ 19.06.2008ರಿಂದ ಜಾರಿಗೆ ಬರುವಂತೆ" ಎಂದು ಹಾಗೂ ಸರ್ಕಾರದ ಪತ್ರ ಸಂಖ್ಯೆ: ಕಸಂವಾಪ್ರ 24 ಕೆಓಎಲ್ 2008 ದಿನಾಂಕ 25.11.2008ರ ಜೊತೆಗೆ ಲಗತ್ತಿಸಿರುವ ಇವರ ಸೇವಾ ಷರತ್ತುಗಳಲ್ಲಿ ನೇಮಕಾತಿ ದಿನಾಂಕವನ್ನು 17.09.2008ರ ಬದಲಿಗೆ '19.06.2008' ಎಂದು ಮತ್ತು ಗುತ್ತಿಗೆ ನೇಮಕಾತಿ ಮಾಸಿಕ ರೂ.5065/-ರ ಬದಲಿಗೆ 'ರೂ.6565/'- ಎಂದು ತಿದ್ದುಪಡಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 24 ಕೆಓಎಲ್ 2008, ದಿನಾಂಕ: 12-12-2008**

**ಗುತ್ತಿಗೆ ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1. ಶ್ರೀಮತಿ ಶ್ರೀವಿದ್ಯಾ, ಶೀಘ್ರಲಿಪಿಗಾರರು ರವರ ಗುತ್ತಿಗೆ ನೇಮಕಾತಿಯ ಅವಧಿಯು ದಿನಾಂಕ 19.06.2008 ರಿಂದ ಜಾರಿಗೆ ಬರುವಂತೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಪದಾವಧಿ ಮುಗಿಯುವವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಇವರ ಗುತ್ತಿಗೆ ನೇಮಕಾತಿಗೆ ಮಾಸಿಕ ರೂ.6565/-(ಆರು ಸಾವಿರದ ಐನೂರ ಅರ್ವತ್ತೈಯ್ದು ರೂಪಾಯಿಗಳು ಮಾತ್ರ)ಗಳ ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಇದಲ್ಲದೆ, ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರನು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವೈದ್ಯಕೀಯ ಕಾರಣಗಳ ಮೇರೆಗಾಗಲೀ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು, ವೈದ್ಯಕೀಯ ಕಾರಣಗಳ ಮೇರೆಗೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರುಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯನ್ನು ಕರ್ತವ್ಯ ರಹಿತ ದಿನಗಳೆಂದು (ಡೈಸ್-ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರೆ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.
7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಿಗೆ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ, ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
8. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಗುತ್ತಿಗೆ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಗಳಿಂದ ನೆರವೇರಿಸುವುದು.

11. ಅವರ ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
12. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
14. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬುಕೊಡಲು ಹೊಣೆಯಾಗಿರುತ್ತಾರೆ.
15. ಆ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್.148

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಉಪನಿರ್ದೇಶಕರ ಉಪಯೋಗಕ್ಕಾಗಿ ಬಾಹ್ಯ ಮೂಲದಿಂದ ವಾಹನ ಸೌಲಭ್ಯ ಪಡೆಯುವ ಬಗ್ಗೆ

**ಓದಲಾಗಿದೆ:**
1) ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಪ್ರಾ:ಸಂಪ:ಉನಿ:ವಾಹನ: 2006-07 ದಿನಾಂಕ:27-10-2006 ಮತ್ತು ಪತ್ರ ಸಂಖ್ಯೆ: ಅಪ್ರಾಸಂಪ:ಉನಿ:ವಾಹನ:2006-07/175 ದಿನಾಂಕ 23-06-2008.
2) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ರವರ ಅಧ್ಯಕ್ಷತೆಯಲ್ಲಿ ದಿನಾಂಕ: 16-07-2005ರಂದು ನಡೆದ ಸಭೆಯ ನಡೆವಳಿಗಳು.

**ಪ್ರಸ್ತಾವನೆ:**

ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು ರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಮೈಸೂರಿನ ಉಪನಿರ್ದೇಶಕರ ಕಛೇರಿಗೆ ಒಂದು ವಾಹನವನ್ನು ಖರೀದಿಸಲು ಪ್ರಸ್ತಾಪಿಸಿರುವರು. ದಿನಾಂಕ 16-07-2005ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡೆವಳಿಗಳನ್ನು ಉಲ್ಲೇಖಿಸಿ ವಾಹನ ಮತ್ತು ವಾಹನ ಚಾಲಕರನ್ನು ಬಾಹ್ಯ ಮೂಲದಿಂದ (out source) ಪಡೆಯಲು ಸೂಚಿಸಲಾಗಿದೆಯೆಂದು ತಿಳಿಸಿರುವರು. ಅದರಂತೆ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 278 ಶಿವಾನಿ 2000 ದಿನಾಂಕ 18-03-2006ರಲ್ಲಿ ಸರ್ಕಾರಿ ಇಲಾಖೆಗಳು ಹೊಸ ವಾಹನವನ್ನು ಖರೀದಿಸುವುದನ್ನು ನಿಷೇಧಿಸಿ ಬದಲಿಗೆ ಅಧಿಕೃತ ಕೆಲಸ ಕಾರ್ಯಗಳಿಗಾಗಿ ಆರ್ಥಿಕ ಇಲಾಖೆಯ ಪೂರ್ವಾನುಮತಿಯನ್ನು ಪಡೆದು ಬಾಡಿಗೆ ಆಧಾರದ ಮೇಲೆ ವಾಹವನನ್ನು ಪಡೆಯಲು ಮಂಜೂರಾತಿ ನೀಡಲಾಗಿದೆ. ಅದರಂತೆ ಮೈಸೂರು ಶ್ರೀರಂಗಪಟ್ಟಣ ಮುಂತಾದ ಪರಂಪರೆ ಪ್ರದೇಶಗಳಲ್ಲಿ ಸಂರಕ್ಷಣೆ ಮತ್ತು ಅಭಿವೃದ್ಧಿ ಕಾರ್ಯಗಳನ್ನು ಸಕ್ರಿಯವಾಗಿ ಕೈಗೊಳ್ಳಲು ಒಂದು ವಾಹನವನ್ನು ಉಪನಿರ್ದೇಶಕರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇವರಿಗೆ ಪಡೆಯಲು ಉದ್ದೇಶಿಸಲಾಗಿದೆಯೆಂದು ತಿಳಿಸಿರುವರು. ಸದರಿ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-103-0-21(ಯೋಜನೆ)051-ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ಭರಿಸಲು ಸಹ ಪ್ರಸ್ತಾಪಿಸಿರುವರು.

ಮುಂದುವರಿದು, ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ರವರ ಕಛೇರಿಯನ್ನು ಸರ್ಕಾರದ ಆದೇಶ ಸಂಖ್ಯೆ: ಸಂಕಇ 43 ಕೆಎಂಯು 2005 ದಿನಾಂಕ 30-05-2005ರಲ್ಲಿ ಮೈಸೂರಿನಿಂದ ಬೆಂಗಳೂರಿಗೆ ಸ್ಥಳಾಂತರಿಸಿದ ಹಿನ್ನೆಲೆಯಲ್ಲಿ ಉಪನಿರ್ದೇಶಕರ ಕಛೇರಿಯನ್ನು ಮೈಸೂರಿನಲ್ಲಿಯೇ ಮುಂದುವರಿಸಲಾಗಿದೆ ಹಾಗೂ ಸದರಿಯವರಿಗೆ ವಾಹನದ ಅವಶ್ಯಕತೆ ಇರುವುದಾಗಿ ತಿಳಿಸಿರುವರು. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 162 ಕೆಎಂಯು 2008, ಬೆಂಗಳೂರು, ದಿನಾಂಕ: 6ನೇ ಜನವರಿ 2009**

ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು ಇವರ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಉಪನಿರ್ದೇಶಕರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು

ಇವರಿಗೆ ಕಛೇರಿಯ ಉಪಯೋಗಕ್ಕಾಗಿ ವಾಹನ ಮತ್ತು ವಾಹನ ಚಾಲಕರನ್ನು ಬಾಹ್ಯ ಮೂಲದಿಂದ (out source) ಪಡೆಯಲು ಮತ್ತು ಈಗಾಗಲೇ ಹಿಂದಿನ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಇವರ ಅನುಮತಿಯೊಂದಿಗೆ ವಾಹನ ಸೌಲಭ್ಯವನ್ನು ಪಡೆದಿರುವುದಕ್ಕೆ ಸರ್ಕಾರದ ಘಟನೋತ್ತರ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1696 ವೆಚ್ಚ–5/2008 ದಿನಾಂಕ 6–11–2008ರಲ್ಲಿ ಅನುಮತಿ ಪಡೆದು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.293

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ರಾಯಚೂರು ಜಿಲ್ಲೆ ರಾಯಚೂರು ತಾಲ್ಲೂಕು, ಯರಗೇರಾ ಹೋಬಳಿ ಮಿರ್ಜಾಪುರ ಗ್ರಾಮದಲ್ಲಿ ದೊರೆತಿರುವ 306 ಬೆಳ್ಳಿ ನಾಣ್ಯಗಳಿಗೆ ಹಣ ಪಾವತಿಸಿ ಇಲಾಖೆಯ ವಶದಲ್ಲಿಟ್ಟುಕೊಳ್ಳಲು ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:**

1) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ದಿನಾಂಕ 09–05–2008ರ ಪ್ರಸ್ತಾವನೆ ಸಂಖ್ಯೆ: ಡಿಎಎಂ: ಟಿಆರ್‌ಟಿ: ಸ:ನಿ: 2008–09 ಮತ್ತು 27–09–2008ರ ಪತ್ರ.
2) ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ ಇವರ ದಿ: 04–08–2008ರ ಪತ್ರ ಸಂಖ್ಯೆ:ಕಂ:ಎಂಎಜಿ: 2:1:2003–04 ಮತ್ತು 24–09–2008ರ ಪತ್ರ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಸರ್ಕಾರಕ್ಕೆ ಪತ್ರ ಬರೆದು 1992–93ನೇ ಸಾಲಿನಲ್ಲಿ ಜಿಲ್ಲಾಧಿಕಾರಿ, ರಾಯಚೂರು ಇವರು ರಾಯಚೂರು ತಾಲ್ಲೂಕು ಯರಗೇರಾ ಹೋಬಳಿ ಮಿರ್ಜಾಪುರ ಎಂಬ ಗ್ರಾಮದಲ್ಲಿ ಲಭ್ಯವಾದ 306 (ಮುನ್ನೂರ ಆರು) ಬೆಳ್ಳಿ ನಾಣ್ಯಗಳನ್ನು ಸರ್ಕಾರದ ಪರವಾಗಿ ವಹಿಸಿಕೊಳ್ಳುವ ಸಲುವಾಗಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದೊಡನೆ ಪತ್ರ ವ್ಯವಹಾರ ಮಾಡಿರುವರೆಂದು ತಿಳಿಸಿರುವರು. ಈ ಬೆಳ್ಳಿ ನಾಣ್ಯಗಳು ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿಯ ಆಡಳಿತದ ಕಾಲದಲ್ಲಿ ಚಲಾವಣೆಯಲ್ಲಿದ್ದ ಒಂದು ರೂಪಾಯಿ ಬೆಳ್ಳಿ ನಾಣ್ಯಗಳಾಗಿದ್ದು ಐತಿಹಾಸಿಕ ಮಹತ್ವ ಹೊಂದಿರುತ್ತವೆ. ಅವುಗಳನ್ನು ಜಿಲ್ಲಾಧಿಕಾರಿಗಳಿಂದ ಪಡೆದು ಇಲಾಖೆಯ ಭದ್ರತಾ ಕೊಠಡಿಯಲ್ಲಿ 25–06–1993ರಿಂದ ಸಂರಕ್ಷಿಸಿಡಲಾಗಿದೆಯೆಂದು ತಿಳಿಸಿರುವರು. ಸದರಿ ಬೆಳ್ಳಿ ನಾಣ್ಯಗಳ ಲೋಹದ ಬೆಲೆಯು ರೂ.58,000/–ಗಳನ್ನು ಜಿಲ್ಲಾಧಿಕಾರಿ, ರಾಯಚೂರು ಇವರ ಮೂಲಕ ಸಂದಾಯ ಮಾಡಬೇಕಾಗುತ್ತದೆ. ಅಲ್ಲದೆ ಬೆಳ್ಳಿ ನಾಣ್ಯಗಳು ಚಾರಿತ್ರಿಕ ಮಹತ್ವವುಳ್ಳದ್ದಾಗಿದ್ದು, ಈಗಾಗಲೇ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವಶದಲ್ಲಿರುವುದರಿಂದ ಸಂಬಂಧಪಟ್ಟವರಿಗೆ ಪರಿಹಾರ ರೂಪದಲ್ಲಿ ರೂ.58,000/– ಹಣ ಸಂದಾಯ ಮಾಡಲು ಜಿಲ್ಲಾಧಿಕಾರಿ, ರಾಯಚೂರು ಇವರಲ್ಲಿ ಠೇವಣಿ ಇಡಬೇಕಾಗುತ್ತದೆ. ಈ ಸಂಬಂಧ ಉದ್ಭವಿಸುವ ವೆಚ್ಚವನ್ನು 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೇತರ) 200 ನಿರ್ವಹಣೆ ಅಡಿಯಲ್ಲಿ ಭರಿಸಲಾಗುವುದೆಂದು ತಿಳಿಸಿರುವರು.

ಮೇಲೆ ಓದಲಾದ (2)ರಲ್ಲಿ ಜಿಲ್ಲಾಧಿಕಾರಿಗಳು, ರಾಯಚೂರು ಇವರು ಸರ್ಕಾರಕ್ಕೆ ವರದಿ ಸಲ್ಲಿಸಿ ಶ್ರೀ ಉಮೇಶ್ ಪಾಟೀಲ ತಂದೆ ಮಾದೇವಪ್ಪ ಇವರ ಮನೆಯಲ್ಲಿ ದೊರೆತ ಹಳೆ ಕಾಲದ 306 ಬೆಳ್ಳಿನಾಣ್ಯಗಳನ್ನು ದಿನಾಂಕ 15–01–1992ರಂದು ಜಪ್ತಿ ಮಾಡಿಕೊಂಡು ಗುನ್ನೇ ಸಂಖ್ಯೆ: 6/1992ರ ಪ್ರಕಾರ ಪ್ರಕರಣವನ್ನು ಯರಗೇರಾ ಪೋಲೀಸ್ ಠಾಣೆಯಲ್ಲಿ ದಾಖಲೆ ಮಾಡಿಕೊಂಡು ಸದರಿ ಪೋಲೀಸ್ ಠಾಣೆಯಲ್ಲಿ ಜಮಾ ಇಡಲಾಗಿದೆ. ಯರಗೇರಾ ಪೋಲೀಸ್ ಠಾಣೆಯಲ್ಲಿ ದಾಖಲಿಸಿದ ಸಿ.ಸಿ. ಸಂಖ್ಯೆ: 298/92ರನ್ವಯ ದಿನಾಂಕ 22–07–1995 ರಂದು ಸಿ.ಜೆ.ಎಂ. ನ್ಯಾಯಾಲಯ, ರಾಯಚೂರು ಇಲ್ಲಿ ಪ್ರಕರಣವು ಇತ್ಯರ್ಥವಾಗಿದೆಯೆಂದು ತಿಳಿಸಿರುವರು. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಸದರಿ 306 ನಾಣ್ಯಗಳ ಕಿಮ್ಮತ್ತು ರೂ.58,000/–ಗಳ ಹಣವನ್ನು ಶ್ರೀ ಉಮೇಶ್ ಪಾಟೀಲ್ ತಂದೆ ಮಾದೇವಪ್ಪ ಇವರಿಗೆ ಪಾವತಿ ಮಾಡಲು ಅನುಮೋದನೆ ಕೋರಿರುವರು.

ಮೇಲಿನ ಪ್ರಸ್ತಾವನೆಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 109 ಕೆಎಂಯು 2008, ಬೆಂಗಳೂರು ದಿನಾಂಕ: 6ನೇ ಜನವರಿ 2009**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಶ್ರೀ ಉಮೇಶ್ ಪಾಟೀಲ್, ತಂದೆ ಮಾದೇವಪ್ಪ, ಸಾ: ಮಿರ್ಜಾಪುರ, ತಾ: ರಾಯಚೂರು ಜಿಲ್ಲಾ ರಾಯಚೂರು ಇವರ ಮನೆಯಲ್ಲಿ ದೊರೆತೆ ಹಳೆ ಕಾಲದ 306 ಬೆಳ್ಳಿ ನಾಣ್ಯಗಳಿಗೆ ಒಟ್ಟು ಕಿಮ್ಮತ್ತು ರೂ.58,000/– (ರೂಪಾಯಿ ಐವತ್ತೆಂಟು ಸಾವಿರ ಮಾತ್ರ) ಗಳನ್ನು ಸದರಿಯವರಿಗೆ ಪಾವತಿಸಲು ಜಿಲ್ಲಾಧಿಕಾರಿ, ರಾಯಚೂರು ಜಿಲ್ಲೆ, ರಾಯಚೂರು ಇವರಲ್ಲಿ ಠೇವಣಿ ಇಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಸರ್ಕಾರವು ಅನುಮತಿಸಿ ಆದೇಶಿಸಿದೆ. ಸದರಿ 306 ಬೆಳ್ಳಿ ನಾಣ್ಯಗಳನ್ನು ಇಲಾಖೆಯ ಭದ್ರತಾ ಕೊಠಡಿಯಲ್ಲಿ ಸುರಕ್ಷಿತವಾಗಿ ಸಂರಕ್ಷಿಸಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಆದೇಶಿಸಿದೆ.

ಈ ಮೊತ್ತವನ್ನು ಲೆಕ್ಕಶೀರ್ಷಿಕೆ 2205–00–103–0–01(ಯೋಜನೇತರ) 200–ನಿರ್ವಹಣೆ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ರವರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಇಡಿ 1307:ಐಎಫ್(ಬಿಎ) 2008 ದಿನಾಂಕ: 28–10–2008ರಲ್ಲಿ ಪಡೆದು ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–07–96 ರನ್ವಯ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.292

**ಎಂ.ಕೆ. ಭರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಬೆಂಗಳೂರಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಉಪನಿರ್ದೇಶಕರ ಹುದ್ದೆಯನ್ನು ಮುಂದುವರಿಸುವ ಬಗ್ಗೆ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 90 ಕೆಎಂಯು 2003 ದಿನಾಂಕ 5–9–2003.
2. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 11 ಕೆಎಂಯು 2007 ದಿನಾಂಕ 26–7–2007 ಮತ್ತು 11–12–2007.
3. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರ ಸಂಖ್ಯೆ: ಡಿಎಎಂ:ಇಎಸ್‌ಟಿ:1:ಕ:ಸಂಖ್ಯೆ:350:2008–09:120 ದಿನಾಂಕ 22–08–2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 5–9–2003ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ, ಬೆಂಗಳೂರಿನಲ್ಲಿರುವ ಸಹಾಯಕ ನಿರ್ದೇಶಕರ (ವಸ್ತು ಸಂಗ್ರಹಾಲಯಗಳ ಅಭಿವೃದ್ಧಿ) ಹುದ್ದೆಯನ್ನು ಒಂದು ವರ್ಷದ ಅವಧಿಗೆ ಉಪನಿರ್ದೇಶಕರ ಹುದ್ದೆಗೆ ಉನ್ನತೀಕರಿಸಲಾಯಿತು. ಸದರೀ ಹುದ್ದೆಯು ಕಾಲಕಾಲಕ್ಕೆ ಮುಂದುವರಿಸಲ್ಪಟ್ಟು ಮೇಲೆ (2)ರಲ್ಲಿ ಓದಲಾದ ದಿನಾಂಕ 26–7–2007ರ ಸರ್ಕಾರಿ ಆದೇಶದಲ್ಲಿ 5–9–2006ರಿಂದ ಒಂದು ವರ್ಷದವರೆಗೆ ಹಾಗೂ ದಿನಾಂಕ 11–12–2007ರ ಆದೇಶದಲ್ಲಿ ಮತ್ತೊಂದು ವರ್ಷದವರೆಗೆ ಮುಂದುವರಿಸಿ ಆದೇಶಿಸಲಾಗಿದೆ. ಉಲ್ಲೇಖ (3)ರ ಪತ್ರದನ್ವಯ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ ಬೆಂಗಳೂರಿನಲ್ಲಿರುವ ಉಪನಿರ್ದೇಶಕರ ಹುದ್ದೆಯು ಅತ್ಯಂತ ಪ್ರಮುಖ ಹಾಗೂ ಅತ್ಯಾವಶ್ಯಕವಾಗಿರುವುದರಿಂದ ಸದರಿ ಹುದ್ದೆಯನ್ನು ದಿನಾಂಕ 5–9–2008ರಿಂದ ಖಾಯಂ ಆಗಿ ಮುಂದುವರಿಸಲು ಪ್ರಸ್ತಾಪಿಸಿರುವರು. ಸದರಿ ಹುದ್ದೆಯನ್ನು ಮುಂದುವರಿಸುವ ವಿಷಯವನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 215 ಕೆಎಂಯು 2008, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008**

ಬೆಂಗಳೂರಿನಲ್ಲಿರುವ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಉಪನಿರ್ದೇಶಕರ ಹುದ್ದೆಯನ್ನು ದಿನಾಂಕ 5–9–2008ರಿಂದ 4–9–2009ರವರೆಗೆ ಒಂದು ವರ್ಷದ ಅವಧಿಗೆ ಸರ್ಕಾರವು ಈ ಮೂಲಕ ಮುಂದುವರಿಸಿ ಆದೇಶಿಸಿದೆ. ಈ ಹುದ್ದೆಗೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ನಿಯಮಾನುಸಾರ ಲಭ್ಯವಿರುವ ವೇತನ ಭತ್ಯೆ ಇತ್ಯಾದಿಗಳು ಅನ್ವಯಿಸುತ್ತವೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ ಅವರು ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 951 ಐಎಫ್‌ಎಸ್ 2008 ದಿನಾಂಕ 21–11–2008ರಲ್ಲಿ ನೀಡಿದ ಸಹಮತಿ

ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–1996ರಲ್ಲಿ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಆದೇಶದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.147

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಬೆಂಗಳೂರು ಆಯುಕ್ತರ ಕಛೇರಿಯ ಹುದ್ದೆಗಳನ್ನು ದಿನಾಂಕ: 27–8–2008 ರಿಂದ ದಿನಾಂಕ: 26–8–2009 ರವರೆಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 95 ಕೆಎಂಯು 2004 ದಿನಾಂಕ 26–8–2004.
2) ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಇವರ ಪತ್ರ ಸಂಖ್ಯೆ: ಅಪ್ರಾಸಂಪ:ಇಎಸ್‌ಟಿ:ಹು.ಮು/2008–09/178 ದಿನಾಂಕ: 25–06–2008.
3) ಸರ್ಕಾರಿ ಆದೇಶಸಂಖ್ಯೆ: ಕಸಂವಾಪ್ರ 110 ಕೆಎಂಯು 2006 ದಿನಾಂಕ: 27–8–2006
4) ತಿದ್ದುಪಡಿ ಆದೇಶ ಸಂಖ್ಯೆ: ಕಸಂವಾಪ್ರ 110 ಕೆಎಂಯು 2006 ದಿನಾಂಕ 22–12–2006
5) ಸರ್ಕಾರಿ ಆದೇಶ ಸಂಖ್ಯೆ: ಸಂಕಇ 199 ಕೆಎಂಯು 2007 ದಿನಾಂಕ 24–10–2007.
6) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 267 ಕೆಎಂಯು 2007 ದಿನಾಂಕ: 31–2008

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 26–08–2004ರ ಸರ್ಕಾರಿ ಆದೇಶದಲ್ಲಿ ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಗೆ ಈ ಕೆಳಕಂಡ 10 ಹುದ್ದೆಗಳನ್ನು ಸೃಜಿಸಿ ಒಂದು ವರ್ಷದ ಅವಧಿಗೆ ಮುಂದುವರಿಸಿದೆ:

| | | |
|---|---|---|
| 1. | ಆಯುಕ್ತರ ತಾಂತ್ರಿಕ ಸಹಾಯಕರು | 1 ಹುದ್ದೆ |
| 2. | ಪತ್ರಾಂಕಿತ ವ್ಯವಸ್ಥಾಪಕರು | 1 ಹುದ್ದೆ |
| 3. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 4. | ಕಂಪ್ಯೂಟರ್ ಡಾಟಾ ಎಂಟ್ರಿ ಆಪರೇಟರ್ | 1 ಹುದ್ದೆ |
| 5. | ವಾಹನ ಚಾಲಕ | 1 ಹುದ್ದೆ |
| 6. | ಅಟೆಂಡರ್ | 1 ಹುದ್ದೆ |

ಹಾಗೂ ಉಪನಿರ್ದೇಶಕರ ಕಛೇರಿ, ಮೈಸೂರು ಇಲ್ಲಿನ ಕೆಳಕಂಡ 4 ಹುದ್ದೆಗಳ:

| | | |
|---|---|---|
| 1. | ಉಪನಿರ್ದೇಶಕರು | 1 ಹುದ್ದೆ |
| 2. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3. | ಶೀಘ್ರಲಿಪಿಗಾರರು | 1 ಹುದ್ದೆ |
| 4. | ಗ್ರೂಪ್–ಡಿ | 1 ಹುದ್ದೆ |

ಮೇಲೆ ಓದಲಾದ (3) ಮತ್ತು (4)ರಲ್ಲಿನ ಆದೇಶಗಳಲ್ಲಿ ಈ ಹುದ್ದೆಗಳನ್ನು ಕಾಲಕಾಲಕ್ಕೆ ಒಂದೊಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ. ನಂತರ ಮೇಲೆ ಓದಲಾದ (5)ರ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ: 27–8–2007ರಿಂದ ದಿ: 26–8–2008ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ. ಮೇಲೆ (6)ರಲ್ಲಿ ಓದಲಾದ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಸಂಬಂಧಿಸಿದಂತೆ ಮುಂದುವರಿದ ಯೋಜನಾ ಕಾರ್ಯಕ್ರಮದ ಅಡಿಯಲ್ಲಿ 2007–08ನೇ ಸಾಲಿನ ಹೊಸ ಘಟಕಗಳಿಗೆ ಹುದ್ದೆಗಳ ಸೃಜನೆಗೆ ಸಂಬಂಧಿಸಿದಂತೆ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಅಧ್ಯರ್ಪಿಸಲಾಗಿರುವ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಗೆ ಬದಲಾಗಿ ಒಂದು ಪುರಾತತ್ವ ಸಂರಕ್ಷಣಾ ಇಂಜಿನಿಯರ್ ಹುದ್ದೆಯನ್ನು ವೇತನ ಶ್ರೇಣಿ ರೂ.14050–25050 ರಲ್ಲಿ ಸೃಜಿಸಲಾಗಿದೆ. ಮತ್ತು ಈ ಹುದ್ದೆಯಲ್ಲಿ ಪುರಾತತ್ವ ಸಂರಕ್ಷಣಾ ಇಂಜಿನಿಯರ್‌ರವರು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುತ್ತಾರೆ. ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ಬೆಂಗಳೂರು ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 25–06–2008ರ ಪತ್ರದಲ್ಲಿ ಮೇಲಿನ 10 ಹುದ್ದೆಗಳನ್ನು ದಿನಾಂಕ: 27–08–2008 ರಿಂದ ಮತ್ತೊಂದು ವರ್ಷದವರೆಗೆ ಮುಂದುವರಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 196 ಕೆಎಂಯು 2008, ಬೆಂಗಳೂರು, ದಿನಾಂಕ: 5ನೇ ಡಿಸೆಂಬರ್ 2008**

ಸರ್ಕಾರವು ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆಯಲ್ಲಿರುವ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ: 27–08–2008 ರಿಂದ ದಿನಾಂಕ: 26–08–2009 ರವರೆಗೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

| | | |
|---|---|---|
| 1. | ಆಯುಕ್ತರ ತಾಂತ್ರಿಕ ಸಹಾಯಕರು | 1 ಹುದ್ದೆ |
| 2. | ಪುರಾತತ್ವ ಸಂರಕ್ಷಣಾ ಇಂಜಿನಿಯರ್ | 1 ಹುದ್ದೆ |
| 3. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 4. | ಬೆರಳಚ್ಚುಗಾರರು | 1 ಹುದ್ದೆ |
| 5. | ವಾಹನ ಚಾಲಕ | 1 ಹುದ್ದೆ |
| 6. | ಅಟೆಂಡರ್ | 1 ಹುದ್ದೆ |

ಹಾಗೂ ಉಪನಿರ್ದೇಶಕರ ಕಛೇರಿ, ಮೈಸೂರು ಇಲ್ಲಿನ ಕೆಳಕಂಡ 4 ಹುದ್ದೆಗಳ:

| | | |
|---|---|---|
| 1. | ಉಪನಿರ್ದೇಶಕರು | 1 ಹುದ್ದೆ |
| 2. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 3. | ಶೀಘ್ರಲಿಪಿಗಾರರು | 1 ಹುದ್ದೆ |
| 4. | ಗ್ರೂಪ್–ಡಿ | 1 ಹುದ್ದೆ |

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 765 ಐಎಫ್(ಬಿಎ) 2007 ದಿನಾಂಕ: 13–10–2008 ರಲ್ಲಿ ನೀಡಿದ ಸಹಮತಿಯ ಮೇರೆಗೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10–07–1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.143

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಬೆಂಗಳೂರು ಮತ್ತು ಮೈಸೂರು ನಡುವೆ ಎರಡನೇ ಬ್ರಾಡಗೇಜ್ ರೈಲ್ವೆ ಹಳಿಯ ಮಾರ್ಗದ ನಿರ್ಮಾಣದ ಸಲುವಾಗಿ ಟಿಪ್ಪು ಸುಲ್ತಾನ್ ಕಾಲದ ಮದ್ದುಗುಂಡಿನ ಕೋಠಿಯೊಂದನ್ನು ಸ್ಥಳಾಂತರಿಸಿ ಹಾಗೂ ಕೋಟೆ ಗೋಡೆಯನ್ನು ಕೆಡವಿದ ನಂತರ ರೈಲ್ವೆ ಟ್ರ್ಯಾಕ್ ಅಂಚಿನಲ್ಲಿ ಅದೇ ಮಾದರಿಯ ಗೋಡೆಯನ್ನು ಪುನರ್ ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ:**

1) ನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ಪತ್ರ ಸಂಖ್ಯೆ: ಡಿಎಎಂ: ಎಸಿಟಿ.6/56/2008–09, ದಿನಾಂಕ 10.07.2008
2) ಪ್ರಧಾನ ಕಾರ್ಯದರ್ಶಿಗಳು ಕನ್ನಡ, ಸಂಸ್ಕೃತಿ ಮತ್ತು ವಾರ್ತಾ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ 7.08.2008ರಂದು ನಡೆದ ಸಭೆಯ ನಡವಳಿಗಳು
3) ಪ್ರಧಾನ ಕಾರ್ಯದರ್ಶಿಗಳು, ಮೂಲಭೂತ ಸೌಲಭ್ಯಗಳ ಇಲಾಖೆ ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ದಿನಾಂಕ 20.09.2008ರಂದು ನಡೆದ ಸಭೆಯ ನಡವಳಿಗಳು
4) ದಿನಾಂಕ 02.01.2009ರಂದು ನಡೆದ ಸಚಿವ ಸಂಪುಟ ಸಭೆಯ ನಿರ್ಣಯ, ಪ್ರಕರಣ ಸಂಖ್ಯೆ 349/2008

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಬೆಂಗಳೂರಿನಿಂದ ಮೈಸೂರು ನಗರದವರೆಗೆ ಎರಡನೇ ಬ್ರಾಡ್‌ಗೇಜ್ ರೈಲ್ವೆ ಹಳಿಯ ಮಾರ್ಗವನ್ನು ಸಾರ್ವಜನಿಕರ ಅನುಕೂಲಕ್ಕಾಗಿ ಕಲ್ಪಿಸಲು ನೈರುತ್ಯ ರೈಲ್ವೆಯವರು ಯೋಜನೆಯೊಂದನ್ನು ಸಿದ್ದಪಡಿಸಿರುತ್ತಾರೆಂದು ತಿಳಿಸಿ ಸದರಿ ಯೋಜನೆಯ ನಕ್ಷೆಯೊಂದಿಗೆ ಹಾಗೂ ಇಲಾಖೆಯ ತಾಂತ್ರಿಕ ತಜ್ಞರು ಮತ್ತು ಸಲಹಾ ಸಮಿತಿಯ ಸದಸ್ಯರಾದ ಶ್ರೀ ಅಶ್ವಥ್‌ನಾರಾಯಣ ಇವರೊಂದಿಗೆ ಸ್ಥಳ ಪರಿವೀಕ್ಷಣೆ ಮಾಡಿದ್ದು, ಈ ಪುರಾತನ ಮದ್ದು ಗುಂಡಿನ ಮನೆಯನ್ನು ಇಟ್ಟಿಗೆ ಹಾಗೂ ಗಾರೆಯಿಂದ ತಳಹದಿಯನ್ನು ಕಲ್ಲಿನಿಂದ ನಿರ್ಮಾಣ ಮಾಡಿರುವುದರಿಂದ ಸಾರ್ವಜನಿಕರ ಹಿತದೃಷ್ಟಿಯಿಂದ ಈ ಮದ್ದಿನ ಮನೆಯನ್ನು ಹೊಸ ತಾಂತ್ರಿಕ ಕೌಶಲ್ಯದಿಂದ ಸ್ಥಳಾಂತರಗೊಳಿಸಿ ಉಳಿಸಿಕೊಳ್ಳುವ ಅಗತ್ಯವಿದೆ

ಎಂದು ಅಭಿಪ್ರಾಯ ವ್ಯಕ್ತಪಡಿಸಿ, ತಾಂತ್ರಿಕ ಸಲಹಾ ಸಮಿತಿಯ ವರದಿಯೊಂದಿಗೆ ಟಿಪ್ಪು ಸುಲ್ತಾನ್ ಕಾಲದ ಮದ್ದು ಗುಂಡಿನ ಕೋಠಿಯನ್ನು ಸ್ಥಳಾಂತರ ಮಾಡಿ, ಸ್ಮಾರಕವು ಹಿಂದಿನ ರೂಪದಲ್ಲಿದ್ದಂತೆ ಮಾಡುವುದಕ್ಕೆ ಅನುಮತಿ ನೀಡಬೇಕೆಂದು ಕೋರುತ್ತಾ, ಮದ್ದಿನ ಮನೆಯ ಪುನರ್ ನಿರ್ಮಾಣಕ್ಕೆ ಬೇಕಾದ ಜಾಗ ಹಾಗೂ ಇದಕ್ಕೆ ತಗಲುವ ವೆಚ್ಚವನ್ನು ಸಂಪೂರ್ಣವಾಗಿ ಭರಿಸಲು ರೈಲ್ವೆ ಇಲಾಖೆಯವವರು ಸಿದ್ದರಿರುತ್ತಾರೆಂದು, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಮೈಸೂರು ರವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ನಡವಳಿಯಂತೆ ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಿ ಸಾರ್ವಜನಿಕ ಹಿತದೃಷ್ಟಿಯಿಂದ ಮದ್ದಿನ ಮನೆಯನ್ನು ಸ್ಥಳಾಂತರಿಸಿ ಪುನರ್ ನಿರ್ಮಾಣ ಮಾಡುವ ಸಂಬಂಧದಲ್ಲಿ ಕಾನೂನು ಸಲಹೆಯನ್ನು ಪಡೆದು ಸಚಿವ ಸಂಪುಟದ ನಿರ್ಣಯಕ್ಕಾಗಿ ಮಂಡಿಸಲು ನಿರ್ಧರಿಸಲಾಯಿತು.

ಮೇಲೆ (3) ರಲ್ಲಿ ಓದಲಾದ ನಡುವಳಿಯಂತೆ ಪ್ರಧಾನ ಕಾರ್ಯದರ್ಶಿಗಳು ಮೂಲಭೂತ ಸೌಲಭ್ಯಗಳ ಇಲಾಖೆ ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ದಿನಾಂಕ 20.09.2008ರ ನಿರ್ಣಯದಂತೆ ಜಂಟಿ ಸ್ಥಳ ಪರಿವೀಕ್ಷಣೆ ಮಾಡಿ ಸೂಕ್ತವಾಗಿ ನಿರ್ಧರಿಸುವಂತೆ ಅಭಿಪ್ರಾಯಿಸಲಾಗಿದೆ.

ಮೇಲೆ (4) ರಲ್ಲಿ ಓದಲಾದ ದಿನಾಂಕ 02.01.2009 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಬೆಂಗಳೂರು ಮತ್ತು ಮೈಸೂರಿನ ನಡುವೆ ಎರಡನೇ ಬ್ರಾಡ್ ಗೇಜ್‌ರೈಲ್ವೆ ಹಳಿಯ ಮಾರ್ಗದ ನಿರ್ಮಾಣದ ಸಲುವಾಗಿ ಟಿಪ್ಪು ಸುಲ್ತಾನ್ ಕಾಲದ ಮದ್ದು ಗುಂಡಿನ ಕೋಠಿಯೊಂದನ್ನು ಸ್ಥಳಾಂತರಗೊಳಿಸಿ ಪುನರ್ ನಿರ್ಮಾಣ ಮಾಡುಲು ಸಚಿವ ಸಂಪುಟವು ಅನುಮೋದಿಸಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 152 ಕೆಎಂಯು 2008, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ದಿನಾಂಕ 02.01.2009 ರಂದು ನಡೆದ ಸಚಿವ ಸಂಪುಟದ ಸಭೆಯ ನಿರ್ಣಯದಂತೆ ರಾಷ್ಟ್ರೀಯ ಮಹತ್ವವನ್ನು (National Importance) ಪಡೆದಿರುವ, ಬೆಂಗಳೂರಿನಿಂದ ಮೈಸೂರು ನಗರದವರೆಗೆ ನಿರ್ಮಿಸಲು ಉದ್ದೇಶಿಸಿರುವ ಎರಡನೇ ಬ್ರಾಡ್‌ಗೇಜ್ ರೈಲ್ವೆ ಹಳಿಯ ಮಾರ್ಗವನ್ನು ನೈರುತ್ಯ ರೈಲ್ವೆಯವರು ಸಾರ್ವಜನಿಕರ ಅನುಕೂಲಕ್ಕಾಗಿ ನಿರ್ಮಿಸಲು ಅಡ್ಡವಾಗಿರುವ/ತೊಡಾಕಾಗಿರುವ ಟಿಪ್ಪು ಸುಲ್ತಾನ್ ಮದ್ದು ಗುಂಡಿನ ಕೋಟೀಯನ್ನು (ಇದರ ಮೂಲ ಆಕೃತಿ ಹಾಳಾಗದಂತೆ ಅತ್ಯುನ್ನತ ತಂತ್ರಜ್ಞಾನ ಬಳಸಿ) ಕೋಟೆಯೊಳಗೆ ಬೇರೆ ಸ್ಥಳದಲ್ಲಿ ರೈಲ್ವೆ ಇಲಾಖೆಯು ಪೂರ್ಣ ವೆಚ್ಚದಲ್ಲಿ ಸ್ಥಳಾಂತರ ಮಾಡಿ ಪುನರ್ ನಿರ್ಮಾಣ ಮಾಡಲು ಹಾಗೂ ಕೋಟೆ ಗೋಡೆಯ ಅಂಚಿನಲ್ಲಿ ಈ ರೈಲ್ವೆ ಮಾರ್ಗವು ಹಾದು ಹೋಗುವುದರಿಂದ ಅಂಚಿನಲ್ಲಿ ಗೋಡೆಯನ್ನು ಕೆಡವಿ ಹಾಕಿದ ನಂತರ ರೈಲ್ವೆ ಟ್ರ್ಯಾಕ್ ಅಂಚಿನಲ್ಲಿ ಅದೇ ಮಾದರಿಯ ಗೋಡೆಯ ಪುನರ್ ನಿರ್ಮಾಣ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.581

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**ವಿಷಯ:** ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2008-09ನೇ ಸಾಲಿನ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 110 ಕೆಎಂಯು 2008, ದಿ: 02.08.2008.
2) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ/1/41/2008-09, ದಿನಾಂಕ 10.11.2008.

**ಪ್ರಸ್ತಾವನೆ:**

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ ಸಿಬ್ಬಂದಿ ವೇತನಕ್ಕಾಗಿ 2008-09ನೇ ಸಾಲಿಗೆ ನಿಗದಿಪಡಿಸಿದ ರೂ.27.30 ಲಕ್ಷಗಳ ಪೈಕಿ ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರೂ.9.00 ಲಕ್ಷಗಳನ್ನು ಬಿಡುಗಡೆ ಮಾಡಲಾಗಿತ್ತು. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಾಧಿಕಾರದ ಆಯುಕ್ತರು ಬಿಡುಗಡೆ ಮಾಡಿದ ಹಣಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿದ್ದು, ಪ್ರಾಧಿಕಾರಕ್ಕೆ ಎರಡನೇ ಕಂತಿನ ಹಣ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 226 ಕೆಎಂಯು 2008, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2009**

ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರದ 2008-09ನೇ ಸಾಲಿನ ಸಿಬ್ಬಂದಿ ವೇತನಕ್ಕಾಗಿ ನಿಗದಿಪಡಿಸಿದ ರೂ.27.30 ಲಕ್ಷಗಳಲ್ಲಿ ಎರಡನೇ ಕಂತಿನ ಮೊತ್ತ ರೂ.18.30 ಲಕ್ಷಗಳನ್ನು (ರೂಪಾಯಿ ಹದಿನೆಂಟು ಲಕ್ಷ

ಮೂವತ್ತು ಸಾವಿರ ಮಾತ್ರ) ಹಂಪಿ ವಿಶ್ವ ಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಪೇಯೀಸ್ ರಸೀತಿ ಮೂಲಕ ಬಿಡುಗಡೆ ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–18 (ಯೋಜನೇತರ) 101 ಸಹಾಯನುದಾನ ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ಹಾಗೂ ವಾರ್ತಾ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಇಡಿ 10 ಐಎಫ್(ಬಿಎ) 2009, ದಿನಾಂಕ 12.01.2009 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.624

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಅಕ್ರಮ ಗಣಿಗಾರಿಕೆ ಬಗ್ಗೆ ಮಾನ್ಯ ಲೋಕಾಯುಕ್ತರವರು ಸರ್ಕಾರಕ್ಕೆ ಸಲ್ಲಿಸಿರುವ ವರದಿಯಲ್ಲಿ ಅರಣ್ಯ ಇಲಾಖೆಗೆ ಸಂಬಂಧಿಸಿದಂತೆ ಶಿಫಾರಸ್ಸು ಮಾಡಿರುವ ಅಂಶಗಳನ್ನು ಪರಿಶೀಲಿಸಲು ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಿಐ 164 ಎಂಎಂಎಂ 2006, ದಿನಾಂಕ: 12–03–2007.

2) ಸರ್ಕಾರದ ಕಾರ್ಯದರ್ಶಿ (ಗಣಿ ಸಪ್ರಕೈ ಮತ್ತು ಜವಳಿ) ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ರವರ ಪತ್ರ ಸಂಖ್ಯೆ: ಸಿಐ 164 ಎಂಎಂಎಂ 2006(ಭಾಗ) ದಿನಾಂಕ: 03–01–2009.

3) ಪ್ರಧಾನ ಕಾರ್ಯದರ್ಶಿ, ಅಪಜೀ ಇಲಾಖೆ ರವರ ಟಿಪ್ಪಣಿ ಸಂಖ್ಯೆ: 14/09 ದಿನಾಂಕ: 15–01–2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶ ದಿನಾಂಕ: 12–03–2007ರಲ್ಲಿ ಕರ್ನಾಟಕ ಲೋಕಾಯುಕ್ತ ಕಾಯ್ದೆ, 1984ರ ಕಲಂ 7(2–ಎ)ರ ಅಡಿ ಸರ್ಕಾರವು ರಾಜ್ಯದಲ್ಲಿನ ಅಕ್ರಮ ಗಣಿಗಾರಿಕೆ ಮತ್ತು ಸರ್ಕಾರದ ಮೇಲಿನ ಆರೋಪಗಳ ಕುರಿತು ತನಿಖೆ ನಡೆಸಲು ಪ್ರಕರಣವನ್ನು ಮಾನ್ಯ ಲೋಕಾಯುಕ್ತರವರಿಗೆ ವಹಿಸಲಾಗಿತ್ತು. ಅದರಂತೆ ಮಾನ್ಯ ಲೋಕಾಯುಕ್ತರು ದಿನಾಕ: 18–12–2008 ರಂದು ಸರ್ಕಾರಕ್ಕೆ ನೀಡಿರುವ ವರದಿಯಲ್ಲಿ ಲೋಕಾಯುಕ್ತ ಕಾಯ್ದೆ, 1984ರ ಕಲಂ 12(3)ರ ಅಡಿಯಲ್ಲಿ ಕೆಲವು ಶಿಫಾರಸ್ಸುಗಳನ್ನು ಮಾಡಿರುತ್ತಾರೆ. ಸದರಿ ಶಿಫಾರಸ್ಸುಗಳನ್ನು ಕಲಂ 12(4) ರ ಪ್ರಕಾರ ಸರ್ಕಾರವು ಪರಿಶೀಲಿಸಿ ಕ್ರಮ ಜರುಗಿಸಬೇಕಾಗಿದೆ. ಆದ್ದರಿಂದ ಈ ಕುರಿತು ನಿರ್ಣಯ ತೆಗೆದುಕೊಳ್ಳಲು ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಿರುವ ಸಮಿತಿಯು ಒಂದು ತಿಂಗಳ ಒಳಗಾಗಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಬೇಕಾಗಿರುವುದರಿಂದ ಅರಣ್ಯ ಇಲಾಖೆಗೆ ಸಂಬಂಧಿಸಿದಂತೆ ವರದಿಯನ್ನು ನೀಡುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಕೋರಿದೆ.

ಅಕ್ರಮ ಗಣಿಗಾರಿಕೆ ಬಗ್ಗೆ ಮಾನ್ಯ ಲೋಕಾಯುಕ್ತರವರು ಸರ್ಕಾರಕ್ಕೆ ಸಲ್ಲಿಸಿರುವ ವರದಿಯಲ್ಲಿ ಅರಣ್ಯ ಇಲಾಖೆಗೆ ಸಂಬಂಧಿಸಿದಂತೆ ಶಿಫಾರಸ್ಸು ಮಾಡಿರುವ ಅಂಶಗಳನ್ನು ಪರಿಶೀಲಿಸಲು ಈ ಕೆಳಕಂಡ ಅಧಿಕಾರಿಗಳನ್ನು ಒಳಗೊಂಡಂತೆ ಒಂದು ಸಮಿತಿಯನ್ನು ರಚಿಸುವಂತೆ ಪ್ರಧಾನ ಕಾರ್ಯದರ್ಶಿ, ಅಪಜೀ ಇಲಾಖೆ ಇವರು ಮೇಲೆ ಓದಲಾದ (3)ರ ಟಿಪ್ಪಣಿಯಲ್ಲಿ ಆದೇಶಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡ ಆದೇಶ.

1) ಶ್ರೀ ಬಿ.ಕೆ. ಸಿಂಗ್,
ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (EPWRT) – ಅಧ್ಯಕ್ಷರು

2) ಶ್ರೀ ಸಿ.ಡಿ. ದ್ಯಾವಯ್ಯ,
ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಸಂರಕ್ಷಣೆ) – ಸದಸ್ಯರು

